# ಹೆಳವ ಸಮುದಾಯ : ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ

(ಬೆಳಗಾಂ ಜಿಲ್ಲೆಯ ಗೋಕಾಕ ಮತ್ತು ರಾಯಬಾಗ ತಾಲೂಕುಗಳನ್ನು ಪರಿಗಣಿಸಿ)

ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ


ಸಂಶೋಧಕ

ಸೋಮಶೇಖರ ಹಂದ್ರಾಳ





ಮಾರ್ಗದರ್ಶಕರು

ಡಾ. ಎ.ಎಸ್. ಪ್ರಭಾಕರ

ಹಿರಿಯ ಶ್ರೇಣಿ ಅಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ - ೫೮೩ ೨೭೬.

# ಹೆಳವ ಸಮುದಾಯ : ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ

(ಬೆಳಗಾಂ ಜಿಲ್ಲೆಯ ಗೋಕಾಕ ಮತ್ತು ರಾಯಬಾಗ ತಾಲೂಕುಗಳನ್ನು ಪರಿಗಣಿಸಿ)

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

ಸಂಶೋಧಕ

ಸೋಮಶೇಖರ ಹಂದ್ರಾಳ



ಮಾರ್ಗದರ್ಶಕರು

ಡಾ. ಎ.ಎಸ್. ಪ್ರಭಾಕರ

ಹಿರಿಯ ಶ್ರೇಣಿ ಅಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ-೫೮೩೨೭೬

# ಪ್ರಮಾಣ ಪತ್ರ

**ಹೆಳವ ಸಮುದಾಯ : ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ** (ಬೆಳಗಾಂ ಜಿಲ್ಲೆಯ ಗೋಕಾಕ ಮತ್ತು ರಾಯಭಾಗ ತಾಲೂಕುಗಳನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೧-೧೦-೦೮

ಸ್ಥಳ : ವಿದ್ಯಾರಣ್ಯ

(ಸೋಮಶೇಖರ ಹಂದ್ರಾಳ)
ಎಂ.ಫಿಲ್ ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩೨೭೬

## ದೃಢೀಕರಣ ಪತ್ರ

**ಹೆಳವ ಸಮುದಾಯ : ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ** (ಬೆಳಗಾಂ ಜಿಲ್ಲೆಯ ಗೋಕಾಕ ಮತ್ತು ರಾಯಭಾಗ ತಾಲೂಕುಗಳನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಶ್ರೀ ಸೋಮಶೇಖರ ಹಂದ್ರಾಳ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೩೧-೧೦-೦೮
ಸ್ಥಳ : ವಿದ್ಯಾರಣ್ಯ

(ಡಾ. ಎ.ಎಸ್. ಪ್ರಭಾಕರ)
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩೨೭೬

# ಪರಿವಿಡಿ


| | |
|---|---|
| **ಅಧ್ಯಾಯ ೧ : ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಿ ವಿಧಾನಗಳು** | ೦೧ |
| ೧.೧ ಅಧ್ಯಯನದ ಉದ್ದೇಶ | ೦೪ |
| ೧.೨ ಅಧ್ಯಯನದ ವಿಧಾನ | ೦೫ |
| ೧.೩ ಅಧ್ಯಯನದ ವ್ಯಾಪ್ತಿ | ೦೭ |
| ೧.೪ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ | ೦೮ |
| **ಅಧ್ಯಾಯ ೨ : ಹೆಳವರ ಹಿನ್ನಲೆ ಮತ್ತು ಆರ್ಥಿಕತೆ** | ೧೪ |
| ೨.೧. ಹೆಳವರೆಂದರೆ ಯಾರು? | ೧೫ |
| ೨.೨. ಹೆಳವ ಸಮುದಾಯದ ಚಾರಿತ್ರಿಕತೆ | ೨೦ |
| ೨.೩. ಹೆಳವ ಸಮುದಾಯದ ಪಂಗಡಗಳು | ೨೩ |
| ೨.೪. ಹೆಳವ ಸಮುದಾಯದ ಆರ್ಥಿಕ ಚಟುವಟಿಕೆಗಳು | ೨೯ |
| **ಅಧ್ಯಾಯ ೩ : ಹೆಳವರ ಪಾರಂಪರಿಕ ವೃತ್ತಿ ಜೀವನ** | ೩೩ |
| ೩.೧ ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವ ಹೆಳವರು | ೩೭ |
| ೩.೨ ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಸಾಮಾಜಿಕತೆ | ೪೧ |
| ೩.೩ ಪಾರಂಪಂರಿಕ ವೃತ್ತಿಯಲ್ಲಿರುವ ಹೆಳವರ ಆರ್ಥಿಕತೆ. | ೫೦ |
| **ಅಧ್ಯಾಯ ೪ : ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರು** | ೫೩ |
| ೪.೧ ಪಾರಂಪರಿಕ ವೃತ್ತಿಯನ್ನು ತೊರೆಯುವುದರ ಹಿಂದಿನ ಕಾರಣಗಳು | ೫೫ |
| ೪.೨ ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು | ೫೮ |
| **ಅಧ್ಯಾಯ ೫ : ನೆಲೆನಿಂತ ಮತ್ತು ಅಲೆಮಾರಿ ಹೆಳವರ ಸಾಮಾಜಿಕತೆಯಲ್ಲಿನ ವೈರುಧ್ಯಗಳು** | ೬೪ |
| ೫.೧ ಪಾರಂಪರಿಕ ವೃತ್ತಿ ಮತ್ತು ವರ್ತಮಾನದಲ್ಲಿ ಸಮುದಾಯದ ಅಭಿವೃದ್ಧಿಯ ಸವಾಲುಗಳು | ೬೮ |
| ೫.೨ ಹೆಳವ ಸಮುದಾಯ: ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ | ೭೦ |
| **ಅಧ್ಯಾಯ ೬ : ಸಮಾರೋಪ** | ೭೪ |


ಅನುಬಂಧಗಳು


| | |
|---|---|
| • ಪರಾಮರ್ಶನ ಗ್ರಂಥಗಳು | ೮೦ |
| • ಕೋಷ್ಟಕಗಳು | ೮೧ |
| • ಮಾಹಿತಿದಾರರ ಪಟ್ಟಿ | ೮೬ |
| • ವ್ಯಕ್ತಿ ಸಂದರ್ಶನದ ಪ್ರಶ್ನಾವಳಿ ಪಟ್ಟಿ | ೮೭ |

ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಿ ವಿಧಾನಗಳು

* ಅಧ್ಯಯನದ ಉದ್ದೇಶ
* ಅಧ್ಯಯನದ ವಿಧಾನ
* ಅಧ್ಯಯನದ ವ್ಯಾಪ್ತಿ
* ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಿ ವಿಧಾನಗಳು

**ಪೀಠಿಕೆ**

ಮಾನವನು ಮೂಲತಃ ಸಮಾಜ ಜೀವಿ ಎಂಬ ಮಾತನ್ನು ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೇ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದ ಮಾನವ ಸಮಾಜ ಜೀವಿಯಾಗಿ ಮತ್ತು ಸಮೂಹ ಜೀವಿಯಾಗಿ ಸಾಮಾಜಿಕ ನಿಯಮಗಳ ಚೌಕಟ್ಟಿನಲ್ಲೇ ಬದುಕುವುದು ಅವನಿಗೆ ಅನಿವಾರ್ಯವಾಗಿತ್ತು. ಹೀಗೆ ಸಮೂಹಗಳ ಸಹವಾಸದಿಂದ ಮಾತ್ರ ಮಾನವನು ಮಾನವನಾಗಿ ಜೀವಿಸಬಲ್ಲ. ಆತನ ಸಾಮಾಜಿಕ ನಡತೆ ಮತ್ತು ವ್ಯಕ್ತಿತ್ವವೆಂಬುದು ಸಮೂಹಗಳ ಕೊಡುಗೆ ಇತಿಹಾಸದ ಆರಂಭದಿಂದಲೂ ಮಾನವನು ಸಮೂಹಗಳಲ್ಲಿ ಜೀವಿಸುತ್ತಾ ಬಂದವನು. ತನ್ನ ಒಡನಾಡಿಗಳ ಸಹವಾಸ ಸಹಯೋಗದಿಂದ ಹೊಸ ಸಮೂಹಗಳನ್ನು ಸ್ಥಾಪಿಸುತ್ತಾ ಬಂದಿದ್ದಾನೆ. ಮಾನವನು ಸೃಷ್ಟಿಸುತ್ತಾ ಬಂದಿರುವ ಹಲವು ಬಗೆಯ ಭಾಷೆ, ಸಂಸ್ಕೃತಿ, ಆಚಾರ-ವಿಚಾರ ಗಳಿಂದಾಗಿ ಸಮೂಹಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ವ್ಯಕ್ತಿಗಳಿಗೆ ಸಾಧ್ಯವಾಗಿದೆ. ಮಾನವರ ದೈನಂದಿನ ವ್ಯವಹಾರಗಳಲ್ಲಿ ಕಂಡು ಬರುವ ಅಸಂಖ್ಯಾತ ಸಮೂಹಗಳೇ "ಸಮಾಜ" ವೆಂಬ ಬೃಹತ್ ವ್ಯವಸ್ಥೆಯನ್ನು ನಿರ್ಮಿಸಿವೆ. ಆದುದರಿಂದಲೇ ಸಮಾಜವೆಂದರೆ "ಸಮೂಹಗಳ ಸಮೂಹ"ವೆಂದು ಕರೆಯಲ್ಪಟ್ಟಿದೆ.

ಮಾನವ ಸಮಾಜದ ಚರಿತ್ರೆ ತುಂಬಾ ದೀರ್ಘವಾದದು. ಒಂದು ಕಾಲದ ಅನಾಗರಿಕ ಮಾನವ ಸಮುದಾಯ ಬೆಳೆದು ಆಧುನೀಕರಣಗೊಂಡಿದೆ. ನಾಗರಿಕತೆಯನ್ನು ಹೊಂದಿದೆ ಎಂದು ಹೇಳಬಹುದು. ಆದರೆ ಸೂಕ್ಷ್ಮವಾಗಿ ನೋಡಿದಾಗ ಈ ಮಾತು ಅರ್ಧಸತ್ಯವೆಂಬಂತೆ ಗೋಚರಿಸಲಾರಂಭಿಸುತ್ತದೆ. ಮಾನವರೆಲ್ಲ ಈ ದೇಶದಲ್ಲಿ ಗೆರೆ ಕೊರೆದಂತೆ ಬದಲಾಗಿಲ್ಲ. ಜನ ಸಮುದಾಯಗಳು ಹರಿಯುವ ನೀರಿನಂತೆ ಪ್ರಧಾನ ಧಾರೆ, ಕಿರುಧಾರೆಗಳಾಗಿವೆ.

ಒಂದೆಡೆ ಬೆಳೆದು ನಿಂತ ಮಾನವರ ಚರಿತ್ರೆಯನ್ನು ನಾಗರಿಕ ಚರಿತ್ರೆಯೆಂದು, ಮತ್ತೊಂದೆಡೆ ಮೂಲ ಸ್ಥಿತಿಯನ್ನು ಉಳಿಸಿಕೊಂಡ ಮಾನವ ಚರಿತ್ರೆಯನ್ನು ಮೂಲ ನಿವಾಸಿಗಳ ಚರಿತ್ರೆ ಅಥವಾ ಬುಡಕಟ್ಟು ಸಮುದಾಯಗಳ ಚರಿತ್ರೆ ಎಂದು ಕರೆಯಬಹುದು. ಬುಡಕಟ್ಟು ಸಮುದಾಯಗಳು ಇಂದಿನ ಅತ್ಯಾಧುನಿಕ ನಾಗರಿಕ ಪರಿಸರದಲ್ಲಿ ತಮ್ಮ ಮೂಲ ಸಂಸ್ಕೃತಿಯ ಅಂಶಗಳನ್ನು ಇನ್ನು ಉಳಿಸಿಕೊಂಡಿವೆ. ಕೆಲವು ಅಪ್ರತ್ಯಕ್ಷವಾಗಿ ಅನುಸರಿಸುತ್ತಿವೆ. ಹೀಗಾಗಿ ಚರಿತ್ರೆ ಎಂದೊಡನೆ ಅಭಿವೃದ್ಧಿಯಾದ ಗುಂಪನ್ನು ಲಕ್ಷಿಸುವುದಲ್ಲ. ಅಲಕ್ಷಿತ ಪರಂಪರೆಗಳನ್ನು ದಾಖಲಿಸುವುದು ಮತ್ತು ಅಧ್ಯಯನ ಮಾಡುವುದಾಗಿದೆ.

ಬುಡಕಟ್ಟು ಸಮುದಾಯಗಳ ಮೂಲ ಸಂಸ್ಕೃತಿಯನ್ನು ನಮ್ಮ ಪೂರ್ವಜರು ತಕ್ಕ ಮಟ್ಟಿಗೆ ಉಳಿಸಿಕೊಂಡಿದ್ದಾರೆ. ನಾಗರಿಕ ಸಮುದಾಯಗಳ ತೀವ್ರ ಪ್ರಭಾವದಿಂದ ಹೊಸ ತಲೆಮಾರಿನಲ್ಲಿ ಅವು ನಿಧಾನವಾಗಿ ಮರೆಯುತ್ತಿವೆ. ಆದ್ದರಿಂದ ಅವು ಸಂಪೂರ್ಣ ಮರೆಯಾಗುವ ಮೊದಲು ಅವನ್ನು ದಾಖಲಿಸುವ ವಿಶ್ಲೇಷಿಸುವ ಕಾರ್ಯ ನಡೆಯಬೇಕು. ಅಂದಾಗ ಮಾತ್ರ ಮಾನವ ಸಮುದಾಯಗಳ ಅಧ್ಯಯನ ಅರ್ಥಪೂರ್ಣವಾದಿತು. ಬುಟಕಟ್ಟು ಸಮುದಾಯಗಳು ನಿಸರ್ಗ ದೊಂದಿಗೆ ಬೆರೆಯುತ್ತ ತಮ್ಮದೇ ಆದ ಆರಾಧನೆ, ಆಚರಣೆ ಹಾಗೂ ನಿಯಮಗಳನ್ನು ಹೊಂದಿವೆ. ಗ್ರಾಮಗಳಲ್ಲಿ ಇಂದಿಗೂ ಸಹ ದೇಹದಂಡನೆಯ ಭಯವೆನ್ನಿಸುವ ಕ್ರೌರ್ಯದ ಪ್ರದರ್ಶನಗಳು ಕಾಣುತ್ತವೆ.

ಭಾರತದಲ್ಲಿ ನೂರಾರು ಬುಡಕಟ್ಟುಗಳು ಇವೆ. ಕಾಡು ಬೆಟ್ಟಗಳಲ್ಲಿಯೇ ವಾಸಿಸುತ್ತಾ ತಮ್ಮ ಉಪವೃತ್ತಿಯನ್ನು ಪೋಷಿಸಿಕೊಂಡು ಬರುತ್ತಿವೆ. ಒಂದು ಬುಡಕಟ್ಟಿನ ಉಪವೃತ್ತಿ ಇನ್ನೊಂದು ಬುಡಕಟ್ಟಿನ ಇಲ್ಲವೇ ಜಾತಿ ವೃತ್ತಿಗಿಂತಲೂ ತೀರಾ ಭಿನ್ನವಾಗಿರುವ ರೀತಿಯಲ್ಲಿಯೇ ಕಾಣಿಸಿಕೊಳ್ಳುತ್ತದೆ. ಯಾವಾಗಲೂ ಸಂಚಾರದಲ್ಲಿಯೇ ತೊಡಗಿ ಭಿಕ್ಷೆ ಬೇಡುತ್ತಾ ಬದುಕುತ್ತಿರುವ ಅಲೆಮಾರಿ. ಅರೆಅಲೆಮಾರಿ ಬುಡಕಟ್ಟುಗಳು ಇನ್ನೂ ಮನೆ ಕಟ್ಟಿಕೊಂಡು ನೆಲೆ ನಿಲ್ಲುವುದರ ಕಡೆ ಮನಸ್ಸು ಮಾಡಿದಂತೆ ಕಂಡು ಬರುವುದಿಲ್ಲ. ಅವರದೇ ಆಗಿರುವ ವಿಶಿಷ್ಟ ರೀತಿಯ ಗುಡಾರಗಳಲ್ಲಿ ವಾಸಿಸುತ್ತಾ ಸಂಚರಿಸುತ್ತಾರೆ.

ಮೂಲಭೂತವಾಗಿ ಮನುಷ್ಯನಿಗೆ ಬೇಕಾಗಿರುವುದು ಆಹಾರ, ಬಟ್ಟೆ, ವಸತಿ ಆದರೆ ಅಲೆಮಾರಿಗಳು ಬಡತನ ರೇಖೆಗಿಂತ ಕೆಳಸ್ಥರದಲ್ಲಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿರುವವರು ಕೃಷಿಯನ್ನೇ ಮೂಲವಾಗಿ ಅವಲಂಬಿಸಿದ್ದಾರೆ. ಯಾವಾಗ ಸ್ಥಿರವಾಗಿ ನೆಲೆನಿಲ್ಲಲು ಬಯಸಿ ಆಯಾ ಪ್ರಾದೇಶಿಕ ನೆಲೆಯಲ್ಲಿ ವಾಸವಾಗಿರ ತೊಡಗಿದರೊ ಆವಾಗಲೇ ಆಧುನಿಕ ಯಂತ್ರೋಪಕರಣಗಳು ಬಳಕೆಗೆ ಬಂದವು. ಸತತವಾಗಿ ದುಡಿಯುವ ಕೈಗಳಿಗೆ ಕೆಲಸ ದೊರೆಯದಾದಾಗ ಅಲೆಮಾರಿಗಳಿಗೆ ಕೆಲಸ ಕೊಡುವವರ್ಯಾರು? ಕೃಷಿ ಕೂಲಿಯನ್ನೇ ನಂಬಿಕೊಂಡಿದ್ದ ಬಡ ಜನರಿಗೆ ವಲಸೆ ಹೋಗುವ ಸ್ಥಿತಿ ಇರುವಾಗ ಒಂದು ನೆಲೆಯೂ ಇರದ ಅಲೆಮಾರಿಗಳು ತಾವು ಕೂಡ

ಪಟ್ಟಣವನ್ನೇ ಆಶ್ರಯಿಸಿದರು. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ವ್ಯಾಮೋಹ ಇರುವುದು ಜಮೀನ್ದಾರರಿಗೆ ಮತ್ತು ಬಂಡವಾಳಶಾಹಿಗಳಿಗೆ. ಸದಾ ಅಲೆಯುವ ಅಲೆಮಾರಿಗಳಿಗೆ ಯಾವ ಊರಾದರೇನು? ಹೊಟ್ಟೆಗೆ ಸಿಕ್ಕರೆ ಸಾಕು. ಹೀಗಾಗಿ ಗ್ರಾಮೀಣ ಪ್ರದೇಶಕ್ಕಿಂತ ನಗರಗಳ ಮೇಲೆ ಹೆಚ್ಚು ಅವಲಂಬಿತರಾಗಿ ಸ್ವತಂತ್ರವಾಗಿ ನೆಮ್ಮದಿಯಾಗಿ ಬದುಕಲು ಬಯಸುತ್ತಾರೆ.

ಇವರು ಗ್ರಾಮ-ನಗರ ಪ್ರದೇಶ ಎಲ್ಲೇ ಇದ್ದರೂ, ಇಂದಿಗೂ ಕೂಡ ಗುಂಪಿನೊಡನೆ ಇರಲು ಬಯಸುತ್ತಾರೆ. ಅಲೆಮಾರಿಗಳಾದ ಇವರು ಸದಾ ಪರಕೀಯತೆ ಹೆದರಿಕೆಯಿಂದ ಜನ ಸಾಮಾನ್ಯರ ಜೊತೆಗೆ ಬೆರೆಯಲು ಇಷ್ಟಪಡದ ಈ ಜನರು ಸಮಾಜದಲ್ಲಿ ತಮ್ಮ ಸ್ಥಾನಮಾನಗಳಿಸಿಕೊಳ್ಳುವುದಾಗಲಿಲ್ಲ. ಪ್ರತ್ಯೇಕತೆಯೇ ಇವರ ಒಂಟಿತನಕ್ಕೆ ಕಾರಣವಾಯಿತು.

ಹೆಳವರು ಈ ಮೇಲಿನ ಎಲ್ಲ ಲಕ್ಷಣಗಳನ್ನು ಹೊಂದಿದ್ದಾರೆ. ಇವರು ಅಲೆಮಾರಿ ಬದುಕನ್ನು ಒಡಲಲ್ಲಿ ಇಟ್ಟುಕೊಂಡು ಊರೂರು ಅಲೆಯುವರು. ಮನೆತನದ ತಲೆಮಾರುಗಳ ವೃತ್ತಾಂತವನ್ನು ಹೇಳುತ್ತಾ ಅವರು ಕೊಟ್ಟ ಧವಸ ದಾನ್ಯಗಳನ್ನು ಪಡೆದು ಇಂದು ಈ ಊರಿನಲ್ಲಿದ್ದರೆ ನಾಳೆ ಇನ್ಯಾವುದೋ ಊರು ಅಲೆಯುತ್ತಾ ಅಲೆಮಾರಿ ಬದುಕನ್ನೇ ಉಸಿರಾಗಿಸಿ ಕೊಂಡಿರುವ ಇವರು ಇಂದು ಅಪಾರವಾದ ಸಮಸ್ಯೆಗಳಿಂದ ನರಳುತ್ತಿದ್ದಾರೆ. ಒಂದು ಕಡೆ ತಮ್ಮ ಪಾರಂಪರಿಕ ವೃತ್ತಿಯನ್ನು ಬಿಟ್ಟು ಕೊಡಲಾಗದ ಸ್ಥಿತಿ. ಇನ್ನೊಂದೆಡೆ ಇದೇ ಸಮುದಾಯ ದವರೇ ತಮ್ಮ ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತೊಡಗಿರುವವರು ತಮ್ಮವರನ್ನೇ ಹೊರಗಿನವರಾಗಿ ನೋಡುತ್ತಿದ್ದಾರೆ. ಪಾರಂಪರಿಕ ವೃತ್ತಿಯನ್ನು ಅನುಸರಿಸುವವರನ್ನು ಹೀಯಾಳಸುತ್ತಾ ಅವರನ್ನು ಕೀಳಾಗಿ ಕಾಣುತ್ತಾರೆ. ಅಷ್ಟೇ ಅಲ್ಲ ಅಂತಹವರ ಮನೆಗೆ ಹೆಣ್ಣು ಕೊಡಲು ಸಹ ಹಿಂಜರಿಯುತ್ತಾರೆ. ಹೀಗೆ ಪಾರಂಪರಿಕ ವೃತ್ತಿ ಅನುಸರಿಸುವವರ ಮತ್ತು ಪಾರಂಪರಿಕ ವೃತ್ತಿಯನ್ನು ತೊರೆದವರ ಮಧ್ಯೆ ದೊಡ್ಡ ಕಂದಕವೇ ನಿರ್ಮಾಣವಾಗುತ್ತಿದೆ.

**ಅಧ್ಯಯನದ ಉದ್ದೇಶ**

ನಮಗೆಲ್ಲಾ ಗೊತ್ತಿರುವಂತೆ ಹಿಂದೆ ಹೊಟ್ಟೆಪಾಡಿಗಾಗಿ ಅನುಸರಿಸುತ್ತಿದ್ದ ವೃತ್ತಿಯು ವಂಶಪಾರಂಪರ್ಯವಾಗಿ ಮಾರ್ಪಟ್ಟಿದ್ದು. ನಂತರ ಅವರ ವೃತ್ತಿಯನ್ನೇ ಸಮಾಜ ಜಾತಿಯಾಗಿ ಪರಿವರ್ತಿಸಿದುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಜಾತಿ ಎಂಬುದು ನಮ್ಮ ದೇಶಕ್ಕಿರುವ ಮಾರಕ ರೋಗವಾಗಿದ್ದು ಕೆಳವರ್ಗದ ಜನ ಇಂದಿಗೂ ಆ ಕಳಂಕ, ಶೋಷಣೆಯಿಂದ ಹೊರಬರ ಲಾಗಿಲ್ಲ. ವಂಶಪಾರಂಪರ್ಯ ವೃತ್ತಿಗಳನ್ನು ಅನುಸರಿಸುತ್ತಿರುವ ಸಮುದಾಯಗಳಲ್ಲಿ ಒಂದು ಸಮುದಾಯ ತನ್ನ ವಂಶಪಾರಂಪರಿಕ ವೃತ್ತಿಯನ್ನು ತ್ಯಜಿಸಿ ಬೇರೆ ವೃತ್ತಿ ಮೂಲಕ ತನ್ನ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದರೆ, ಇನ್ನೊಂದು ಸಮುದಾಯ ತನ್ನ ಮೂಲವೃತ್ತಿಯ ಮೂಲಕವೇ ತನ್ನ ಸ್ಥಾನಮಾನದ ಉನ್ನತಿಗಾಗಿ ಹೆಣಗುತ್ತಿರುವುದು ಕಂಡುಬರುತ್ತದೆ. ಇಂತಹ ಸ್ಥಿತಿ ಹೆಳವ ಸಮುದಾಯಕ್ಕೆ ಹೊರತಾಗಿಲ್ಲ.

**ಪ್ರಸ್ತುತ ಅಧ್ಯಯನದ ಉದ್ದೇಶಗಳು**

೧. ಹೆಳವ ಸಮುದಾಯದ ಚಾರಿತ್ರಿಕ ವಿಶ್ಲೇಷಣೆ.

೨. ವರ್ತಮಾನದಲ್ಲಿ ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿ ವಿಶ್ಲೇಷಣೆ.

೩. ಹೆಳವರಲ್ಲಿ ಪಾರಂಪರಿಕ ವೃತ್ತಿಯನ್ನು ತೊರೆದವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆ.

೪. ಹೆಳವರ ಈ ಎರಡು ಗುಂಪುಗಳ ನಡುವಿನ ಪರಂಪರೆ ಮತ್ತು ಆಧುನಿಕತೆಯ ಸಂಘರ್ಷದ ವಿಶ್ಲೇಷಣೆ.

**ಅಧ್ಯಯನದ ವಿಧಾನಗಳು**

ಮುಖ್ಯವಾಗಿ ಇದು ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದೆ. ಈಗಾಗಲೇ ಈ ಸಮುದಾಯದ ಮೇಲೆ ನಡೆದ ಅಧ್ಯಯನಗಳನ್ನು ಗಮನಿಸಿ ಅದರ ಹಿನ್ನೆಲೆಯಲ್ಲಿ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಈ ಸಮುದಯದವರ ಸ್ಥಿತಿಗತಿಗಳನ್ನು ವಿವರಿಸುವ ಸಲುವಾಗಿ, ಪಾರಂಪರಿಕ ವೃತ್ತಿಯಲ್ಲಿ ತೊಡಗಿರುವವರನ್ನು ಮತ್ತು ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತೊಡಗಿರುವವರನ್ನು ಸಂಪರ್ಕಿಸಿ ಈ ಕೆಳಗಿನ ವಿಧಾನಗಳ ಮೂಲಕ ಮಾಹಿತಿ ಪಡೆಯಲಾಗಿದೆ.

**೧) ಚಾರಿತ್ರಿಕ ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ಹೆಳವ ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ಅಧ್ಯಯನ ಮಾಡಲಾಗಿದೆ. ಹೆಳವ ಸಮುದಾಯವು ಭಾರತೀಯ ಸಾಂಪ್ರದಾಯಿಕ ಸಮಾಜದಲ್ಲಿ ಬೆಳೆದು ಬಂದ ರೀತಿಯನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಈ ಸಮುದಾಯದ ಕುರಿತು ಇದುವರೆಗೆ ನಡೆದ ಅಧ್ಯಯನಗಳು, ಸಾಹಿತ್ಯಗಳು, ಮತ್ತು ಉಲ್ಲೇಖಗಳನ್ನು ಬಳಸಿಕೊಳ್ಳುವುದರ ಜೊತೆ ಪ್ರಸ್ತುತ ವರ್ತಮಾನದ ಸ್ಥಿತಿಯಲ್ಲಿರುವ ಬದಲಾವಣೆಯನ್ನು ಕಂಡು ಕೊಳ್ಳಲು ಪ್ರಯತ್ನಿಸಲಾಗಿದೆ.

**೨) ಸಂದರ್ಶನ ವಿಧಾನ**

ಹೆಳವ ಸಮುದಾಯದವರು ಕಡಿಮೆ ಇದ್ದರೂ ಸಹ ಕರ್ನಾಟಕದಾದ್ಯಂತ ನೆಲೆಸಿದ್ದಾರೆ. ಅಲ್ಲದೆ ಕೆಲವರು ಪಾರಂಪರಿಕ ವೃತ್ತಿಯಲ್ಲೇ ಬದುಕು ಸಾಗಿಸುತ್ತಿದ್ದಾರೆ. ಇನ್ನೂ ಕೆಲವರು ಪಾರಂಪರಿಕ ವೃತ್ತಿಯಿಂದ ಹೊಟ್ಟೆ ಹೊರೆಯುವುದು ಕಷ್ಟವೆಂಬ ಕಾರಣಕ್ಕಾಗಿ ಇತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಅಧ್ಯಯನಕ್ಕಾಗಿ ಇಂತಹವರನ್ನೆಲ್ಲಾ ಸಾಧ್ಯವಾದಷ್ಟು ಮಟ್ಟಿಗೆ ಸಂದರ್ಶಿಸಿ ಮಾಹಿತಿ ಪಡೆಯಲಾಗಿದೆ.

**೩) ಪ್ರಶ್ನಾವಳಿ ವಿಧಾನ**

ಸಾಮಾಜಿಕ ಸಂಶೋಧನೆಯಲ್ಲಿ ಪ್ರಶ್ನಾವಳಿ ವಿಧಾನವು ಇಂದು ಅತಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಹೀಗಾಗಿ ಹೆಳವ ಸಮುದಾಯದ ಅಧ್ಯಯನದಲ್ಲಿ ಹಲವಾರು ಪ್ರಮುಖ ಪ್ರಶ್ನೆಗಳನ್ನು ಮತ್ತು ಸಂದರ್ಭಕ್ಕನುಗುಣವಾಗಿ ಉಪಪ್ರಶ್ನೆಗಳನ್ನು ಕೇಳುವುದರೊಂದಿಗೆ ಸಾಕಷ್ಟು ಮಾಹಿತಿ ಪಡೆಯಲು ಪ್ರಯತ್ನಿಸಲಾಗಿದೆ.

**೪)ಅವಲೋಕನ ವಿಧಾನ**

ಅವಲೋಕನ ವಿಧಾನದಲ್ಲಿ ನಾವು ಮೂರು ಪ್ರಕಾರಗಳನ್ನು ನೋಡಬಹುದಾಗಿದೆ.

- ಸಹಭಾಗಿ ಅವಲೋಕನ ವಿಧಾನ.
- ಅಸಹಭಾಗಿ ಅವಲೋಕನ ವಿಧಾನ
- ನಿಯಂತ್ರಿತ ಅವಲೋಕನ ವಿಧಾನ

ಮೂರು ವಿಧಾನಗಳು ಸಹ ಅಧ್ಯಯನದಲ್ಲಿ ತುಂಬಾ ಪ್ರಾಮುಖ್ಯತೆ ಪಡೆದಿವೆ. ಆದರೆ ಇಲ್ಲಿ ಸಹಭಾಗಿ ಅವಲೋಕನವನ್ನು ಮಾತ್ರ ಅಳವಡಿಸಿಕೊಳ್ಳುವುದರ ಮೂಲಕ ಹೆಳವ ಸಮುದಾಯದ ವರ್ತಮಾನದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಯತ್ನಿಸಲಾಗಿದೆ.

**೫) ತೌಲನಿಕ ವಿಧಾನ**

ಒಂದು ಸಮುದಾಯದಲ್ಲಿನ ಪ್ರಾದೇಶಿಕ ಭಿನ್ನತೆಗಳನ್ನು ಅರಿಯಲು ತುಲನಾತ್ಮಕ ವಿಧಾನಗಳು ಹೆಚ್ಚು ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ. ಈ ಸಮುದಾಯವು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಂಶಾವಳಿಯನ್ನು ಹೇಳಲು ಒಕ್ಕಲು ಮನೆಗಳಿಗೆ ಅಲೆಯುವುದರಿಂದ ವಿಷಯ ವಿಚಾರಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿರುತ್ತವೆ. ಆದ್ದರಿಂದ ವಿಷಯಗಳನ್ನು ಸಂಗ್ರಹಿಸಿ ತೌಲನಿಕವಾಗಿ ಹೇಳುವಲ್ಲಿ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೬) ಮಾದರಿ ಆಯ್ಕೆ ವಿಧಾನ**

ಮಾದರಿ ವಿಧಾನವು ಸಾಮಾಜಿಕ ಸಂಶೋಧನೆಯಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದು ಅತಿ ಕಡಿಮೆ ಅವಧಿಯಲ್ಲಿ ಹೆಚ್ಚು ಮಾಹಿತಿಯನ್ನು ಸಂಗ್ರಹಿಸಲು ಸಹಾಯಕವಾಗಿದೆ. ಅಲ್ಲದೆ ಸಂಶೋಧನಾ ಕ್ಷೇತ್ರವು ವಿಶಾಲವಾಗಿದ್ದಾಗ ಈ ವಿಧಾನವೇ ಹೆಚ್ಚು ಸೂಕ್ತವಾದುದಾಗಿದೆ. ಹೆಳವ ಸಮುದಾಯವು ಕಡಿಮೆ ಸಂಖ್ಯೆಯಲ್ಲಿದ್ದರೂ ಸಹ ಕರ್ನಾಟಕದಾದ್ಯಂತ ಎಲ್ಲಾ ಪ್ರದೇಶಗಳಲ್ಲಿ ನೆಲೆಸಿರುವುದರಿಂದಾಗಿ ಎಲ್ಲಾ ಪ್ರದೇಶಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸುವುದು ಕಷ್ಟವೆಂಬ ಕಾರಣಕ್ಕಾಗಿ ಸಮುದಾಯದ ಎಲ್ಲಾ ಲಕ್ಷಣಗಳನ್ನು ಒಳಗೊಂಡಿರುವ ಬೆಳಗಾವಿ ಜಿಲ್ಲೆಯ ಗೋಕಾಕ್ ಮತ್ತು ರಾಯಬಾಗ ತಾಲ್ಲೂಕಿನ ಎರಡೂ ಗ್ರಾಮಗಳನ್ನು ಯಾದೃಚ್ಛಿಕ ನಮೂನೆ ಮೂಲಕ ಆಯ್ಕೆ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಅಧ್ಯಯನದ ಮಿತಿ**

ಈ ಸಂಶೋಧನೆಯು ಅಲ್ಪ ಅವಧಿಯದಾದ್ದರಿಂದ ಈಗಾಗಲೇ ಹೆಳವ ಸಮುದಾಯದ ಮೇಲೆ ನಡೆದಿರುವ ಅಧ್ಯಯನಗಳನ್ನು ಪರಿಗಣಿಸಿ ಬೆಳಗಾಂ ಜಿಲ್ಲೆಯ ಗೋಕಾಕ್ ಮತ್ತು ರಾಯಬಾಗ ತಾಲ್ಲೂಕಿನ ಎರಡು ಹಳ್ಳಿಗಳ ೧೦೦ ಕುಟುಂಬಗಳಲ್ಲಿನ ೫೦ ಪಾರಂಪರಿಕ ವೃತ್ತಿ ಮಾಡುವವರು. ಮತ್ತು ೫೦ ಪಾರಂಪರಿಕ ವೃತ್ತಿ ತೊರೆದ ಕುಟುಂಬಗಳನ್ನು House Hold Survey ಮಾಡಲಾಗಿದೆ. ಹೆಳವರ ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುವುದರೊಂದಿಗೆ ಪ್ರಸ್ತುತ ವೃತ್ತಿಯಲ್ಲಿರುವವರ ಮತ್ತು ಪಾರಂಪರಿಕ ವೃತ್ತಿ ತೊರೆದವರ ನಡುವಿನ ಭಿನ್ನತೆ ಹಾಗೂ ಪಾರಂಪರಿಕ ವೃತ್ತಿ ಮತ್ತು ಆಧುನಿಕ ಸಂಘರ್ಷದ ಕುರಿತು ವಿವರಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ**

ಹೆಳವರು ಮೂಲತ ಕೃಷಿಕರನ್ನು ಅವಲಂಬಿಸಿದ ಅರೆ ಅಲೆಮಾರಿ ಸಮುದಾಯದವರಾಗಿದ್ದಾರೆ. ಜಾಗತೀಕರಣದ ಪ್ರಭಾವದಿಂದಾಗಿ ಇವರ ಜೀವನ ಕ್ರಮದಲ್ಲಿ, ಮುಖ್ಯವಾಗಿ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತಿತರ ಅಂಶಗಳಲ್ಲಿ ಸಾಕಷ್ಟು ಬದಲಾವಣೆಯಾಗಿದೆ. ಅಲ್ಲದೆ ಹೆಳವರಲ್ಲೇ ಕೆಲವರು ಪಾರಂಪರಿಕ ವೃತ್ತಿಯನ್ನು ತೊರೆದಿದ್ದಾರೆ. ಇನ್ನೂ ಕೆಲವರು ಅದೇ ವೃತ್ತಿಯಲ್ಲಿ ಮುಂದುವರೆದಿದ್ದಾರೆ. ಹೀಗಾಗಿ ಇವೆರಡು ರೀತಿಯ ಜನರನ್ನು ಸಂಪರ್ಕಿಸಿ ಅವರ ನಡುವಿನ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ವ್ಯತ್ಯಾಸಗಳನ್ನು ತಿಳಿಯಲು ಮತ್ತು ಪ್ರಸ್ತುತ ಅವರ ಸ್ಥಿತಿಗತಿಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ಇದು ಕರ್ನಾಟಕ ರಾಜ್ಯದಲ್ಲಿನ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಮತ್ತು ರಾಯಬಾಗ ತಾಲ್ಲೂಕಿನಲ್ಲಿರುವ ಹೆಳವ ಸಮುದಾಯದ ಅಧ್ಯಯನವಾಗಿದೆ. ಹೆಳವರು ಕರ್ನಾಟಕದ ೨೭ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ೨೦೦೫ನೇ ವರ್ಷದ ಕರ್ನಾಟಕ ರಾಜ್ಯ ಹೆಳವರ ಸಂಘ ನಡೆಸಿದ ಗಣತಿಯ ಪ್ರಕಾರ ಬೆಂಗಳೂರು ನಗರ ಜಿಲ್ಲೆಯಲ್ಲಿ ಅತಿಹೆಚ್ಚು ಅಂದರೆ ೧೩೯೨೩ ಜನ ವಾಸಿಸುತ್ತಿದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ಅತಿ ಕಡಿಮೆ ಅಂದರೆ ೩೨ ಜನ ವಾಸ ಮಾಡುತ್ತಿದ್ದಾರೆ. ಕರ್ನಾಟಕದಲ್ಲಿ ಒಟ್ಟು ೨೭ ಜಿಲ್ಲೆಗಳಲ್ಲಿ ೧೩,೦೧೬ ಕುಟುಂಬಗಳು ವಾಸವಾಗಿದ್ದು ೭೫,೭೮೪ ಜನಸಂಖ್ಯೆಯನ್ನು ಈ ಸಮುದಾಯ ಹೊಂದಿದೆ. ಪ್ರಸ್ತುತ ಗೋಕಾಕ್ ತಾಲ್ಲೂಕಿನ ಜೋಕಾನಟ್ಟಿಯಲ್ಲಿ ೬೪ ಮನೆಗಳಿದ್ದು ೫೭೦ ಸದಸ್ಯರು ವಾಸಿಸುತ್ತಿದ್ದಾರೆ. ಮತ್ತು ರಾಯಬಾಗ ತಾಲ್ಲೂಕಿನ ಮಂಟೂರು ಗ್ರಾಮದಲ್ಲಿ ೬೦ ಮನೆಗಳಿದ್ದು ೫೨೬ ಜನ ವಾಸಿಸುತ್ತಿದ್ದಾರೆ.

ಪ್ರಸ್ತುತ ಅಧ್ಯಯನವು ಬೆಳಗಾಂ, ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಂಟೂರು ಮತ್ತು ಗೋಕಾಕ ತಾಲ್ಲೂಕಿನ ಜೋಕಾನಟ್ಟಿ ಗ್ರಾಮಗಳನ್ನು ಸಮಗ್ರವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಹೆಳವರ ಬಗೆಗೆ ಈವರೆಗೆ ಆಂಶಿಕವಾದ ರೀತಿಯ ಕೆಲವು ಲೇಖನಗಳು ಮೂಡಿ ಬಂದಿವೆ. ಆದರೆ, ಹೆಳವ ಸಮುದಾಯದ ಸಮಗ್ರ ರೂಪದ "ಪಾರಂಪರಿಕ ವೃತ್ತಿ ಮತ್ತು ಆಧುನಿಕತೆಯ ಸಂಘರ್ಷ"ದ ಕುರಿತು ಅಧ್ಯಯನಗಳು ನಡೆದಿಲ್ಲವೆಂದೆ ಹೇಳಬಹುದು. ಇಲ್ಲಿಯವರೆಗೆ ಇವರನ್ನು ಕುರಿತು ಕೆಲವು ಸಂಶೋಧನಾ ಗ್ರಂಥಗಳು, ಲೇಖನಗಳು, ಸಾಹಿತ್ಯ ಕೃತಿಗಳು, ವರದಿಗಳು ಹೊರ ಬಂದಿವೆ.

೧೯೦೯ರಲ್ಲಿ ದಕ್ಷಿಣ ಭಾರತದ ಆದಿವಾಸಿಗಳ ಮತ್ತು ವಿವಿಧ ಜಾತಿ ಸಮುದಾಯಗಳ ಅಧ್ಯಯನ ಕೈಗೊಂಡ ಎಡ್ಗರ ಥರ್ಸ್ಟನ್ ಅವರು "The caste and tribes of southern India" ಗೆಜೆಟಿಯರದಲ್ಲಿ ಹೀಗೆ ವಿವರಿಸಿದ್ದಾರೆ.

"ಹೆಳವ ಅಂದರೆ ಕಾಲಿಲ್ಲದವನು ಅಥವಾ ಅಂಗ ಹೀನ ಎಂದು ಹೇಳುತ್ತಾ ಅವರು ಭಿಕ್ಷುಕ ವರ್ಗಕ್ಕೆ ಸೇರಿದವರಾಗಿದ್ದು, ಬಳ್ಳಾರಿ, ಮೈಸೂರು ಮುಂತಾದ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಇವರು ಹಳ್ಳಿಗಳ ಚಾರಿತ್ರಿಕ ಇತಿಹಾಸಕಾರರಾಗಿದ್ದಾರೆ. ಸಾಮಾನ್ಯವಾಗಿ ಅವರು ಹಳ್ಳಿಗಳಿಗೆ ಎತ್ತಿನ ಗಾಡಿಯಲ್ಲಿ ಬರುತ್ತಾರೆ. ಹಳ್ಳಿಯ ಮಧ್ಯದಲ್ಲಿ ತಮ್ಮ ಬಿಡಾರವನ್ನು ಹೂಡುತ್ತಾರೆ. ಎತ್ತಿನ ಮೇಲೆ ಕುಳಿತು ಒಕ್ಕಲು ಮನೆಗಳಿಗೆ ಹೋಗುವಾಗ ತಮ್ಮ ಕಾಲನ್ನು ಕಂಬಳಿಯಲ್ಲಿ ಮುಚ್ಚಿಕೊಂಡು ಮನೆಯಿಂದ ಮನೆಗೆ ಹೋಗಿ ವಿವಿಧ ಕುಟುಂಬದವರ ವಂಶಾವಳಿ ಹೇಳುತ್ತಾರೆ".[೧]

ಥರ್ಸ್ಟನ್ ಅವರ ಈ ಮಾತು ಹೆಳವರ ವೃತ್ತಿಯನ್ನು ಸೂಚಿಸುತ್ತದೆ. ಆದರೆ ಹೆಳವ ಎಂಬ ಹೆಸರು ಇವರಿಗೇಕೆ ಬಂದಿತು ಎಂದು ವಿವರಿಸಿಲ್ಲ. ಅಲ್ಲದೆ ಹೆಳವರು ಭಿಕ್ಷೆ ಬೇಡುತ್ತಾರೆ ಎಂಬ ಮಾತು ಅಷ್ಟಾಗಿ ಸರಿ ಕಾಣದು. ಹೆಳವರು ಎಲ್ಲರ ಮನೆಗಳಗು ಹೋಗಿ ಧವಸ, ಧಾನ್ಯ ಪಡೆಯದೆ ಕೇವಲ ತಮ್ಮ ವಕ್ಕಲು ಮನೆಗಳಿಗೆ ಮಾತ್ರ ಹೋಗಿ ಅವರ ಜನನ, ಮರಣ, ಇತ್ಯಾದಿ ಪೂರ್ವಜರ ಇತಿಹಾಸವನ್ನು ಹೋಗಳ ಅವರ ಮನೆಯಿಂದ ಕಾಳು ಕಡ್ಡಿಗಳನ್ನು ಹಳೆಬಟ್ಟೆ, ಪಾತ್ರೆ, ಹಸು, ಕುರಿ, ಕೋಳಿಗಳನ್ನು ದಾನವಾಗಿ ಪಡೆದು ತರುವುದರಿಂದ ಇವರನ್ನು ಭಿಕ್ಷುಕರೆನ್ನಲಾಗದು.

"Helava meaning lame person, is the name of a calss of a mendicants, who in Bellary, Mysore and other localities, are the custodians of village histories. They generally arrive at the villages mounted on a Bullock, and

with their legs concealed by wollen blankets. They go from house to house giving the history of the different families, the names of heroes, who died, in war and so forth."

೧೯೩೦ರಲ್ಲಿ "The Mysore Tribes and Castes (Vol-III)"ದಲ್ಲಿ ಎಚ್.ವಿ. ನಂಜುಂಡಯ್ಯನವರು ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್‌ರವರು ಹೆಳವರನ್ನು ಕುರಿತು ಹೀಗೆ ಹೇಳಿದ್ದಾರೆ.

"ಒಕ್ಕಲಿಗನೊಬ್ಬನಿಗೆ ೭ ಜನ ಮಕ್ಕಳಿದ್ದರು. ಅವರಲ್ಲಿ ಕಿರಿಯವನು ಹುಟ್ಟಿನಿಂದಲೇ ಕುಂಟನಾಗಿದ್ದನು. ಅವನ ಅಣ್ಣಂದಿರು ಕಿರಿಯ ತಮ್ಮನನ್ನು ಕಂಡು ತುಂಬಾ ಅಸೂಯೆ ಪಡುತ್ತಿದ್ದರು ಅಲ್ಲದೇ ಅವನನ್ನು ಮನೆಯಿಂದ ಓಡಿಸಲು ಸಾಕಷ್ಟು ಪ್ರಯತ್ನಿಸುತ್ತಾರೆ. ಆದರೆ ಅವನು ಸಾಕಿದ್ದ ಪ್ರೀತಿಯ ಎತ್ತು ಅವನನ್ನು ರಕ್ಷಿಸುತ್ತದೆ. ಕೊನೆಗೆ ಕುಂಟನಿಗೆ ಮನೆಯಿಂದ ಆಸ್ತಿಯ ಒಂದು ಭಾಗ ಕೊಟ್ಟು ಹೊರಹಾಕಲು ತೀರ್ಮಾನಿಸುತ್ತಾರೆ. ಕೊನೆಗೆ ಶಿವನು ಪ್ರತ್ಯಕ್ಷನಾಗಿ ಕಾಲಿಲ್ಲದ ನಿಸ್ಸಾಯಕ ಹೆಳವನ ಬಗ್ಗೆ ಕನಿಕರಪಟ್ಟು ಅವನ ಆರು ಅಣ್ಣಂದಿರನ್ನು ಕರೆಸಿ ಸಂಪೂರ್ಣ ಆಸ್ತಿಯನ್ನು ಅವರೆ ಹಂಚಿಕೊಂಡು ಕುಂಟನಿಗೆ ಒಂದು ಎತ್ತನ್ನು ಮತ್ತು ಗಂಟೆಯನ್ನು ಕೊಟ್ಟು, ದಿನಾಲೂ ಬೆಳಗ್ಗೆ ಎತ್ತಿನ ಮೇಲೆ ಕುಳಿತು ಗಂಟೆಯನ್ನು ಬಾರಿಸಿಕೊಂಡು ಕುಂಟ ಅವರ ಆರು ಜನ ಅಣ್ಣಂದಿರ ಮನೆಗೆ ಬಂದಾಗ ಅವರು ಅವನ ಉಪ ಜೀವನಕ್ಕಾಗಿ ಬೇಕಾಗುವ ದವಸ-ಧಾನ್ಯ ಮತ್ತು ಹಣ ಕೊಡಬೇಕೆಂದು ಹೇಳಿದನು. ಹೀಗೆ ಕುಂಟನು ವೃತ್ತಿಯಿಂದ ಭಿಕ್ಷುಕ ಹೆಳವನಾದನು. ಆ ಹೆಳವನದೇ ಒಂದು ಜಾತಿಯಾಗಿ ಅವನ ವಂಶಜರು ಹೆಳವ ಜಾತಿಯವರಾದರು"[೨]

**HELAVA:** a community of karnataka. they are known as pichiguntla in Andhra Pradesh and as helava in maharashtra. the term helava means lame man. according to Nanjundayya and I year (1930) An okkaliga had seven sons of whom the youngest was born Cripple elder brothers became envious of him on the score of their mother showing undue partiality at their expanse. they tried to yet rid of him in various wasy, but he was always rescued by a favouriate bull reared in the family. At last they hit on the expenditen of sending him away with a share of family property to shift for himself. This he could not do and God siva observing his helpless condition, brought about a reconciliation between the brothers, giving all the patrimony to them and directing that they should give him aims whenever he went to beg sitting on his friendly bull, ringing a bell to a praise others of his calling. His descendants

are known by the name of Hevalas and the practice of Begging in the manner originally enjoined has struck to them. Thurston (1909) quoting from the salem manual describes pichigunta as the descendants of Vellala. Who had one hundred children and out of them. one was lame, his brothers used to supply him one Kalagan of grain and a coin each year. This lame man was married to a telagu woman of a different caste. The children of the couple having no caste of their own were known as pichhi (beggars or lamp) and used to receive food grain and money from the children of the other Vellala brothers (Indians Communites Vol.III:1930, H.M.K.S. Singh: Pp.1277-1278).

೧೯೨೨ರಲ್ಲಿ ಆರ್.ಇ. ಎಂತೋವನ್ ಅವರು ಹೆಳವರನ್ನು ಕುರಿತು “The Tribes and Castes of Bombay” ಗೆಜಿಟೆಯರದಲ್ಲಿ ಹೀಗೆ ಹೇಳಿದ್ದಾರೆ. “ಹೆಳವರೆಂದರೆ ಕಾಲಿಲ್ಲದವರೆಂದು ಅರ್ಥ. ಇವರು ಸುಮಾರು (೧೯೦೧) ೧,೦೮೮ ಸಂಖ್ಯೆಯಲ್ಲಿದ್ದು ಅವರಲ್ಲಿ ೫೫೭ ಜನ ಪುರುಷರು ಮತ್ತು ೫೩೧ ಜನ ಸ್ತ್ರೀಯರು ಇದ್ದು ಧಾರ್ಮಿಕ ಭಿಕ್ಷುಕ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಅವರು ಬೆಳಗಾಂ, ಧಾರವಾಡ, ಬಿಜಾಪುರ, ಮತ್ತು ಕೆನರಾ ಜಿಲ್ಲೆಗಳಲ್ಲಿದ್ದಾರೆ. ಕೆಲವು ವಿಷಯಗಳಲ್ಲಿ ಅವರು ಪಂಗುಲರನ್ನು ಹೋಲುತ್ತಾರೆ. ಆದರೆ ಅವರಿಂದ ಇವರು ಲಿಂಗಾಯಿತರಾಗಿದ್ದು ಬೇರ್ಪಡುತ್ತಾರೆ. ಹೆಳವ ಜಾತಿಯು ನಿಜಾಮನ ಪ್ರಾಂತ್ಯದಲ್ಲಿದ್ದ ಕಲ್ಯಾಣವೆಂಬ ಸ್ಥಳದಿಂದ ಬಂದಿತೆಂದು ಹೇಳುತ್ತಾರೆ. ಹೆಳವರ ಮೂಲ ಅಥವಾ ಉಗಮದ ಬಗ್ಗೆ ಹೇಳುವುದಾದರೆ ೧೨ನೇ ಶತಮಾನದಲ್ಲಿ ಲಿಂಗಾಯಿತ ಧರ್ಮವು ಇಳಿಮುಖವಾಗುತ್ತಾ ಮತ್ತು ಜೈನ ಧರ್ಮವು ಪ್ರವರ್ಧಮಾನಕ್ಕೆ ಬರುತ್ತಿದ್ದಾಗ ಶಿವನು ತನ್ನ ಸೇವಕರನ್ನು ಕರೆದು ಭೂಮಿಗೆ ಬಂದ ಮೇಲೆ, ಬಣ್ಣ, ಬಣ್ಣದ ವಸ್ತುಗಳನ್ನು ಧರಿಸಿ ಎತ್ತಿನ ಮೇಲೆ ಕುಳಿತು, ಮನೆಯಿಂದ ಮನೆಗೆ ಶಿವನ ಕುರಿತು ಹಾಡುತ್ತಾ, ಹೊಗಳುತ್ತಾ ಹೋಗುವವರೆಂತಲೂ ತಿಳಿಯುತ್ತದೆ. ಇದನ್ನು ಅನುಸರಿಸಿ ಇಂದಿಗೂ ಸಹ ಹೆಳವರು ಭಿಕ್ಷೆಗೆ ಹೋಗುವಾಗ, ಒಂದು ಕಾಲನ್ನು ಕಂಬಳಿಯಲ್ಲಿ ಮುಚ್ಚಿಕೊಂಡಿರುತ್ತಾರೆ.”[*]

“Helavas, Literarlly cripples, numbering (1991), 1088 including 557 men and women are a class of religious beggars found in Belagum, Bijapur, Dharwar and the kanara districts. In some respects they resemble the panguls a Hindu begging caste. But differ from them in being lingayats. The caste is said to have come from the terriortory about Kalyan in the Nizam's dominion. The tradition regarding its origin is that in the twenth country when Jainsim was predominant and Lingayatism was deeling the god shiva ordered his prameths,

or attendants, to visit the earth and receive lingaytism. The Helavas calim to descended from one of these pramaths or attendants named Vakkalabhring who, on coming down to the earth, woreochare coloured cloths, sat on a bullock and went from house to house singing the praries on the god Shiva. In imitation of him, the Helavas, when going begging hide one of their legs in a blanket even at the present day".

೧೯೫೦ರ ಸುಮಾರಿಗೆ ಹೈದರಾಬಾದ್ ನಿಜಾಮನ ಪ್ರಾಂತ್ಯದ ಸಮುದಾಯಗಳನ್ನು ಅಧ್ಯಯನ ಮಾಡಿದ ಸಯದ್ ಸಿರಾಜ್ ಉಲ್‌ಹಸನ್ ಅವರ ವಿವರಣೆ ಹೀಗಿದೆ. "ಪಿಚ್ಯಕುಂಟಲ, ಪಿಚ್ಚಗುಂಟ, ಭಕ್ತೋಳ್ಳು ಮತ್ತು ಗೊಲ್ಲಕುಲಮ್ ಎಂದು ವಿವಿಧ ಹೆಸರುಗಳಿಂದ ಕರೆಯಲ್ಪಡುವ ಈ ಸಮುದಾಯ ಮೂಲತಃ ತೆಲಗು ದೇಶದ ಅಲೆಮಾರಿ ಭಿಕ್ಷುಕ ಸಮುದಾಯವಾಗಿದೆ. ಇವರು ವಿವಿಧ ವಂಶಾವಳಿಗಳ ವಿವರಗಳನ್ನು ದಾಖಲಿಸುವ ವಂಶಾವಳಿ ಶಾಸ್ತ್ರಜ್ಞರು ಮತ್ತು ಚಾಪೆ ಹೆಣೆಯುವವರು 'ಪಿಚ್ಚಕುಂಟ' ಭಿಕ್ಷಾಕುಂಟಲ ಎಂಬ ಪದದಿಂದ ಬಂದಿದೆ. "ಪಿಚ್ಚಗುಂಟ" ಎಂಬುದು ಕಾಲಿಲ್ಲದ ಭಿಕ್ಷುಕನಿಗೆ ಇರುವ ನಿಂದನಾತ್ಮಕ ಗುಣವಾಚಕ ಪದವಾಗಿದೆ".[೨]

ವಿ.ಎಸ್. ನರಸಿಂಹ ಅಯ್ಯಂಗಾರ ಅವರು ತಮ್ಮ "Census of India 1891" ಗ್ರಂಥದಲ್ಲಿ ಹೆಳವರನ್ನು ಜೋಗಿ ಸಮುದಾಯದ ಗುಂಪಿಗೆ ಸೇರಿಸಿದ್ದಾರೆ.

| | | |
|---|---|---|
| "ಜೋಗಿ" | ೧. ಗಂಟಿಜೋಗಿ | ಹಿಂದು |
| | ೨. ಗೊರವ | " |
| | ೩. ಹೆಳವ | " |
| | ೪. ಜಂಗಲಿಗ | " |
| | ೫. ಜೋಗಿ | " |
| | ೬. ಮೊಂಡ | " |
| | ೭.ಪಂಕನಾತಿ | " |
| | ೮.ಪಿಚ್ಚಕುಂಟೆ | " |
| | ೯.ಉದ್ದಿನಕೊರವ | "೫ |
| Jogi | 1. Ganti Jogi | Hindu |
| | 2. Gorava | " |
| | 3. Helava | " |
| | 4. Jangalinga | " |

5. Jogi "

6. Monda "

7. Pankanati "

8. Pienchakunte "

9. Uddina Korava "

"ಆಗ ಜನಗಣತಿಗಾಗಿ ಹಿಂದೂಗಳನ್ನು ೨೮ ಜಾತಿಗಳಾಗಿ, ವಿಂಗಡಿಸಿ, ೧೦ ಸಾವಿರಕ್ಕಿಂತಲೂ ಕಡಿಮೆ ಇರುವ ಜಾತಿಗಳ ಹೆಸರನ್ನು ಹೇಳಿ, ಅದಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿರಬಹುದಾದ ಹೆಳವರ ಜಾತಿ ಮತ್ತು ಅವರ ಸಂಖ್ಯೆ ಏಕೆ ಹೇಳಲಿಲ್ಲ; ಅವರನ್ನು ಅಲೆಮಾರಿ ಜನಾಂಗಗಳಲ್ಲಿ ಒಂದಾದ ಜೋಗಿ ಜನಾಂಗದ ಗುಂಪಿಗೆ ಸೇರಿಸಿದ್ದೆ ಇದಕ್ಕೆ ಕಾರಣವಿರಬೇಕು. ಆದರೆ ಹೆಳವರು ಅಲೆಮಾರಿಗಳೂ ಅಲ್ಲ, ಜೋಗಿಗಳು ಅಲ್ಲ. ಅವರಿಗೆ ಒಂದು ನೆಲೆ ಇತ್ತು. ಅಲ್ಲದೇ ಅವರು ಎಲ್ಲೆಂದರಲ್ಲಿ ಹೋಗಿ ಭಿಕ್ಷೆ ಬೇಡುತ್ತಿದ್ದ ಜನ ಅಲ್ಲ. ಒಂದು ಕಡೆ ನಿಂತು ತಮ್ಗೆ ನಿಗದಿಯಾದ 'ಕುಳ'ಗಳ ಮನೆಗೆ ವರ್ಷಕ್ಕೊಂದು ಸಲವೋ ಎರಡು ಸಲವೋ ಹೋಗಿ ಆ ಕುಳಗಳನ್ನು ಹೊಗಳಿ, ಹರಕೆ ಹೇಳಿ ತಮ್ಮ ಪಾಲಿನ ದವಸ-ಧಾನ್ಯ, ಬಟ್ಟೆ-ಬರೆ, ದನ-ಕರುಗಳನ್ನು ಪಡೆದುಕೊಂಡು ಬರುತ್ತಿದ್ದರು. ಇದರಿಂದ ಸಾಕಷ್ಟು ಅನಕೂಲವೂ ಅವರಿಗೆ ಇತ್ತು. ಇನ್ನೊಬ್ಬರಿಂದ ಭಿಕ್ಷೆ ಬೇಡುವ ಸಂದರ್ಭ ಇಲ್ಲಿಯವರೆಗೆ ಹೆಳವರಿಗೆ ಒದಗಿಯೇ ಇಲ್ಲ".[೬]

ಹೆಳವರನ್ನು ಕುರಿತು ಇಲ್ಲಿಯವರೆಗೆ ಸಾಕಷ್ಟು ಸಮೀಕ್ಷೆಗಳು, ಅಧ್ಯಯನಗಳು ಸಾಹಿತ್ಯ ಕೃತಿಗಳು, ಲೇಖನಗಳು, ವರದಿಗಳು ಪ್ರಕಟವಾಗಿದ್ದರೂ ಸಹ ಸಮಾಜವು ನಿಂತ ನೀರಿನಂತಿರದೆ ಸದಾ ಹರಿಯುವ ನದಿಯಂತೆ ಇರುವುದರಿಂದ ಅಂದರೆ ಪರಿವರ್ತನೆಯಾಗುತ್ತಿರುವುದರಿಂದ ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಪಾರಂಪರಿಕ ವೃತ್ತಿಯನ್ನು ಅನುಸರಿಸಿಕೊಂಡು ಬರುತ್ತಿರುವ ಕೊರಮರು, ದುರ್ಗಿಮುರ್ಗಿಯರು, ಡೊಂಬರು, ಹಗಲುವೇಷಗಾರರು, ಹೆಳವರು, ಮುಂತಾದವರು ಸಾಕಷ್ಟು ಸಮಸ್ಯೆಗಳಲ್ಲಿ ಸಿಲುಕಿದ್ದಾರೆ. ಒಂದು ರೀತಿಯಲ್ಲಿ ಪಾರಂಪರಿಕ ವೃತ್ತಿಯನ್ನು ಬಿಡಲಾರದ ಸ್ಥಿತಿ ಬದಲಿ ಉದ್ಯೋಗಗಳಲ್ಲಿ ತೊಡಗಲು ಬಂಡವಾಳ, ಶಿಕ್ಷಣ, ಕೌಶಲ್ಯ ಮಾರ್ಗದರ್ಶಕರ ಕೊರತೆ, ಸಾಲದಕ್ಕೆ ಪಾರಂಪರಿಕ ವೃತ್ತಿಯನ್ನು ತೊರೆದು ಬೇರೆ ವೃತ್ತಿಯಲ್ಲಿ ತೊಡಗಿರುವವರು ಇವರನ್ನು ಕೀಳಾಗಿ ಕಾಣುತ್ತಿರುವ ಸ್ಥಿತಿ, ಇಂತಹ ಸ್ಥಿತಿಗಳಿಂದ ಮಾನಸಿಕ ಯಾತನೆಯನ್ನು ಅನುಭವಿಸುತ್ತಿರುವ ಇವರು ಇಂದಿಗೂ ಮುಖ್ಯವಾಹಿನಿಗೆ ಬರಲಾಗದೇ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ನರಳುತ್ತಿದ್ದಾರೆ. ಇಂತಹ ಸಮಸ್ಯೆಗಳಿಂದ ಹೊರತಾಗಿರದ ಹೆಳವ ಸಮುದಾಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**ಅಡಿಟಿಪ್ಪಣಿ**

೧. "The castes and Tribes of Southern india by Edgar Thruston., Vol. II, 1975, P. 328 ಉಲ್ಲೇಖ: ಹರಿಲಾಲ್ ಪವಾರ., ಹೆಳವರ ಸಂಸ್ಕೃತಿ (ಉಪಸಂಸ್ಕೃತಿ ಮಾಲೆ), ೧೯೯೩ ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು. ಪು. ೭

೨. The Mysore Tribes and Castes, H.V. Nanjundayya and L.K. Ananthakrishna Iyer., ಉಲ್ಲೇಖ: Indians Communites Vol.III:1930, H.M.K.S. Singh: Pp.1277-1278

೩. "The tribes and castes of Bombay, By R.E. Enthoven, Vol.II 1922. P.72. ಉಲ್ಲೇಖ: ಹರಿಲಾಲ್ ಪವಾರ., ಹೆಳವರ ಸಂಸ್ಕೃತಿ (ಉಪಸಂಸ್ಕೃತಿ ಮಾಲೆ), ೧೯೯೩ ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು. ಪು. ೧೦

೪. The Castes and tribes of the HEH The Nizames Dominion, Sayed Siraj Wl Hasan, P. 568, 1950 ಉಲ್ಲೇಖ: ಡಾ. ಎ.ಎಸ್. ಪ್ರಭಾಕರ., ಹೆಳವರು ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆ ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರುಗೆ ಸಲ್ಲಿಸಿದ ವರದಿ, ಪು. ೩೦-೩೧

೫. Census of India 1891 Vol. XXV Mysore Part II Imperial Tabus 1 to XVI, Page 307, By U.N. Narasimh Iyangar. ಉಲ್ಲೇಖ: ಪ್ರೊ. ಬಿ.ಬಿ. ಮಹೀಶವಾಡಿ., ಹೆಳವರ ಹಾಡುಗಳು, ಸಾಹಿತ್ಯ ದರ್ಶನ ಭಾಗ-೪, ೧೯೭೮, ಪು. ೧೬೩

೬. ನಾಗೇಗೌಡ ಎಚ್.ಎಲ್., ಹೆಳವರು ಮತ್ತು ಅವರ ಕಾವ್ಯಗಳು, ೧೯೮೨, ಪ್ರಾಸ್ತವನೆ ಪು. ೧

ಅಧ್ಯಾಯ - ೨

# ಹೆಳವರ ಹಿನ್ನಲೆ ಮತ್ತು ಆರ್ಥಿಕತೆ

* ಹೆಳವರೆಂದರೆ ಯಾರು ?
* ಹೆಳವ ಸಮುದಾಯದ ಚಾರಿತ್ರಿಕತೆ
* ಹೆಳವ ಸಮುದಾಯದ ಪಂಗಡಗಳು
* ಹೆಳವ ಸಮುದಾಯದ ಆರ್ಥಿಕ ಚಟುವಟಿಕೆಗಳು

# ಹೆಳವರ ಹಿನ್ನಲೆ ಮತ್ತು ಆರ್ಥಿಕತೆ

**ಹೆಳವರೆಂದರೆ ಯಾರು?**

'ಹೆಳವ' ಎಂಬ ಪದ ಈ ಸಮುದಾಯಕ್ಕೆ ಹೇಗೆ ಬಂದಿತೆಂದು ನಿಕರವಾಗಿ ಹೇಳಲಾಗದು. ಆದರೂ ಸಹ ಅಧ್ಯಯನಕಾರರು 'ಹೆಳವ' ಎಂಬ ಪದ ಈ ಸಮುದಾಯಕ್ಕೆ ಹೇಗೆ ಬಂದಿತು ಎಂಬುವುದರ ಕುರಿತು ಸಾಕಷ್ಟು ಚರ್ಚಿಸಿದ್ದಾರೆ. ಕೆಲವರ ಪ್ರಕಾರ 'ಹೆಳವ' ಎಂದರೆ ಕುಂಟ ಅಥವಾ ಅಂಗವಿಕಲ, ಅವನ ವಂಶಜರೇ ನಂತರದಲ್ಲಿ ಹೆಳವರೆಂದು ಕರೆಸಿಕೊಳ್ಳತೊಡಗಿದರು ಎಂದು ವಾದಿಸಿದರೆ, ಇನ್ನೂ ಕೆಲವರು 'ಹೆಳವ' ಎಂದರೆ 'ಹೇಳುವವ' ಎಂದು ಅರ್ಥೈಸಿದ್ದಾರೆ. 'ಹೆಳವರು' ಎತ್ತಿನ ಮೇಲೆ ಕುಳಿತು ಒಕ್ಕಲು ಮನೆಗಳಿಗೆ ಹೋಗಿ ಅವರ ಮನೆತನದ ವಂಶಾವಳಿಗಳನ್ನು ಹೇಳುತ್ತಿದ್ದರಿಂದ ಕಾಲಾನಂತರದಲ್ಲಿ ಇವರು 'ಹೆಳವ' ಎಂಬ ಹೆಸರಿನಿಂದ ಗುರುತಿಸಿಕೊಳ್ಳ ತೊಡಗಿದರು ಎಂಬ ವಾದಗಳು ಇವೆ.

೧೮೯೭ರಲ್ಲಿ ಕನ್ನಡ ಇಂಗ್ಲೀಷ್ ನಿಘಂಟು ರಚಿಸಿದ ರೆವರೆಂಡ್ ಎಫ್ ಕಿಟ್ಟಲ್‌ರು "ಹೆಳವ" ಎಂಬ ಪದಕ್ಕೆ ತಮ್ಮ ನಿಘಂಟುವಿನಲ್ಲಿ ಹೀಗೆ ಹೇಳಿದ್ದಾರೆ.

"ಹೆಱವ Helava - ಹೆಱವ – A lame man a cripple (ಖಂಜ, ಪಂಗು, ಶ್ರೋಣ) ಕೈಯಿಲ್ಲದ ಹೆವಿಯನು (ಕುರುಕ ಕುಣಿ) ಹೆವಿವನಿಗೆ ಭಾಗೀರಥಿಯೋ? ಕಳುವವಗೆ ಅರಮನೆಯೋ? ಹೆಱವ ಹೆಮ್ಮರದ ಹಣ್ಣು ಬಯಸಿದರೆ ಗಾಳಿ ಗುದ್ಧಿ, ಮೆಯ್ ನೋಯಿಸಿಕೊಣ್ಣ".[೧]

ಇಲ್ಲಿ ಕಿಟ್ಟೆಲ್‌ರು ಹೆಳವನ ಬಗ್ಗೆ ಅಂದರೆ ಅಂಗವಿಕಲನ ಬಗ್ಗೆ ಹೇಳಿದ್ದಾರೆಯೇ ಹೊರತು 'ಹೆಳವ' ಸಮುದಾಯದ ಬಗ್ಗೆ ಹೇಳಿಲ್ಲ. ಕಿಟ್ಟೆಲ್‌ರು ಇತರ ಸಮುದಾಯದವರ ಬಗ್ಗೆ ಪ್ರಸ್ತಾಪಿಸಿರುವುದನ್ನು ಕಾಣುತ್ತೇವೆ. ಆದರೆ, ಇವರ ಬಗ್ಗೆ ಹೇಳದಿರುವುದು ಆಶ್ಚರ್ಯದ ವಿಷಯವಾಗಿದೆ. "ನಿಘಂಟುವಿನ ರಚನೆಯ ಸಂದರ್ಭದಲ್ಲಿ ಹೆಳವರು ಎಲ್ಲಡೆ ಇದ್ದು ಅಷ್ಟು

ಹೊತ್ತಿಗಾಗಲೇ ಇವರೊಂದು ಜಾತಿಯಾಗಿಯೂ ಪರಿಗಣಿಸಲ್ಪಟ್ಟಿದ್ದರು. ಏಕೆಂದರೆ ಹಯವದನರಾವ ಗೆಜೆಟಿಯರ್‌ನಲ್ಲಿ (೧೯೨೭) ಹೆಳವರ ಜಾತಿ ಪದ್ಧತಿಗಳ ಬಗ್ಗೆ ಸಾಕಷ್ಟು ವಿವರಗಳು ಬರುತ್ತವೆ. ಹೀಗಿರುವಾಗ ಇಂದಿಗಿಂತ ಹೆಚ್ಚಾಗಿ ಹಿಂದೆ ಗಂಟೆಯನಾದ ಮಾಡುತ್ತ ಊರೂರು ತಿರುಗುತ್ತಿದ್ದ ಹೆಳವರ ವಿಷಯ ಕಿಟ್ಟೆಲ್ ಅವರ ಕಿವಿಗೂ ಬಿದ್ದಿರಬೇಕು.

ಕನ್ನಡ ಜಾನಪದ ವಿಶ್ವಕೋಶ ಸಂಪಾದಕರಾದ ಡಾ.ಚಂದ್ರಶೇಖರ ಕಂಬಾರರವರು ಸಂಪುಟ ಒಂದರಲ್ಲಿ "ಕುಂಚ ಒಕ್ಕಲಿಗರ" ಬಗ್ಗೆ ಹೇಳುವಾಗ "ಹೆಳವರು ತಮ್ಮ ಮೂಲವನ್ನು ಕುರಿತು ಹೇಳುವ ಒಂದು ಕಥೆಯ ಪ್ರಕಾರ 'ಕರುಹೊಳೆ'ಯ ತೀರದ ಹನ್ನೆರಡು ಗ್ರಾಮದ ಗೌಡಗಳು ವರ್ಷ ಬದುಕು ಬಾಳುಮಾಡಿ, ನೂರೊಂದು ಕುಲ ಹದಿನೆಂಟು ಪಣಕಟ್ಟು ಹಂಚಿಕೊಳ್ಳಬೇಕೆಂದು ತೀರ್ಮಾನಿಸಿಕೊಂಡು ಹಂಚಿಕೊಳ್ಳುವ ಸಂದರ್ಭದಲ್ಲಿ ಕುಳತುಕೊಂಡವನು "ಕುಂಚ ಒಕ್ಕಲಿಗ" ಎಂಬ ಹೆಸರು ಪಡೆದನಂತೆ. ನಿಂತಿದ್ದವನು "ನಿಜ ಒಕ್ಕಲಿಗ"ನಾದನಂತೆ, ಹೀಗೆ ಹೆಳವರು ತಾವೂ ಒಕ್ಕಲಿಗರಲ್ಲಿ ಒಂದು ಜಾತಿ" ಎಂದು ಹೇಳಕೊಳ್ಳುತ್ತಾರೆ.

ಎರಡನೇಯ ಸಂಪುಟದಲ್ಲಿ "ನಿಜ ಒಕ್ಕಲಿಗ"ರ ಬಗ್ಗೆ ಹೇಳುವಾಗ "ಹೆಳವರು ತಮ್ಮ ಮೂಲವನ್ನು ಗುರುತಿಸಿಕೊಳ್ಳುವಲ್ಲಿ ಒಂದು ಕಥೆ ಇದೆ. ಅವರು ತಾವೂ ಒಕ್ಕಲಿಗರ ಒಂದು ವರ್ಗವೆಂದು ತಿಳದುಕೊಂಡಿದ್ದಾರೆ. 'ಕರುಹೊಳೆ' ಎಂಬ ಹೊಳೆಯ ತೀರದ ಗ್ರಾಮದ ಗೌಡಗಳು ಹನ್ನೆರಡು ವರ್ಷ ಬದುಕಿ ಬಾಳ ನೂರೊಂದು ಕುಲ ನೂರೊಂದು 'ಪಣಕಟ್ಟು' ಹಂಚಿಕೊಳ್ಳ ಬೇಕೆಂದು ನಿರ್ಧರಿಸಿ ಹಂಚಿಕೊಂಡಾಗ ಕುಂತಿದ್ದವನು "ಕುಂಚ ಒಕ್ಕಲಿಗ"ನಾದನು. ನಿಂತಿದ್ದವನು 'ನಿಜ ಒಕ್ಕಲಿಗ'ನಾದನು. ಹೀಗೆ ಒಕ್ಕಲಿಗರಲ್ಲೂ ಹಲವಾರು ವರ್ಗಗಳು ಉಗಮವಾದವೆಂದು ತಿಳದು ಬಂದಿದೆ. ಅವರಲ್ಲಿದ್ದ ಹೆಳವನೊಬ್ಬನು ಮುಂದೆ "ಹೆಳವ ಕುಲವಾಯಿತು"[೩] ಎಂದು ಹೇಳದ್ದಾರೆ.

೧೯೮೬ರಲ್ಲಿ ರಚನೆಯಾದ "Second backward class commission (Vol.III)ದಲ್ಲಿ ಟಿ. ವೆಂಕಟಸ್ವಾಮಿ ಹೀಗೆ ಹೇಳದ್ದಾರೆ.

"ಹೆಳವ ಎಂದರೆ ಕುಂಟ, ಅಂಗಹೀನ, ಕೇವಲ ಒಕ್ಕಲಿಗರಿಂದ ಮಾತ್ರ ಭಿಕ್ಷೆ ಬೇಡುವ ಭಿಕ್ಷುಕ ಸಮುದಾಯ ಅಥವಾ ವರ್ಗಕ್ಕೆ ಸಾಂಪ್ರದಾಯಿಕವಾಗಿ ಹೆಳವರು ಅನುತ್ತಾರೆ. ತೆಲುಗು ಭಾಷೆಯಲ್ಲಿ ಇವರಿಗೆ "ಪಿಚೆಗುಂಟ" ಎಂದು ಹೇಳುತ್ತಾರೆ. ಇದು ಭಿಕ್ಷುಕರ ಮತ್ತು ವಂಶಾವಳ ಬಗ್ಗೆ ಹೇಳುವವರ ಕೂಟ"[೪] ಎಂದು ತಿಳಯುತ್ತದೆ.

೧೯೮೨ರಲ್ಲಿ ಎಚ್.ಎಲ್.ನಾಗೇಗೌಡರು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಸಾಕಷ್ಟು ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಮಾಹಿತಿಯನ್ನು ಒಳಗೊಂಡಿರುವ "ಹೆಳವರು ಮತ್ತು ಅವರ ಕಾವ್ಯಗಳು" ಎಂಬ ಕೃತಿಯಲ್ಲಿ ಹೆಳವರ ಕುರಿತು ಹೀಗೆ ಹೇಳದ್ದಾರೆ.

"೧೯೮೩ರಲ್ಲಿ ಎಚ್.ಎಲ್. ನಾಗೇಗೌಡರು ತಮ್ಮ ಹೆಳವರು ಮತ್ತು ಅವರ ಕಾವ್ಯಗಳು ಎಂಬ ಪುಸ್ತಕದಲ್ಲಿ ಹೆಳವರ ಬಗ್ಗೆ ಇರುವ ಕಥೆಗಳನ್ನು ಪುರಾಣಗಳನ್ನು ಆಧರಿಸಿ ಹೀಗೆ ಹೇಳಿದ್ದಾರೆ. ಹೆಳವರೆಂದರೆ ಹೆಳವರೂ ಹೌದು. ಹೇಳುವರೂ ಹೌದು ಎನ್ನುತ್ತಾರೆ. ಏಕೆಂದರೆ ಹೆಳವರ ಮೂಲ ಪುರುಷ ಹೆಳವ ಕುಂಟನಾಗಿದ್ದ ಕಾರಣ ಇವರು ಹೆಳವರೆಂದು ಅಲ್ಲದೆ ಇವರು ಒಕ್ಕಲು ಮನೆಗಳಿಗೆ ಹೋಗಿ ಕುಲವೃತ್ತಾಂತವನ್ನು ಹೇಳುತ್ತಿದ್ದರಿಂದ "ಹೇಳುವವರು" ಹೌದು ಎನ್ನುತ್ತಾರೆ".[೪]

ಪ್ರೊ. ಬಿ.ಎಂ. ತೆಳಗಡಿ ಅವರು ೧೯೮೦ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಪೀಠದ 'ಜಾನಪದ ಸಾಹಿತ್ಯ ದರ್ಶನ ಭಾಗ-೦೩ರಲ್ಲಿ ಹೆಳವರ ಬಗ್ಗೆ ಹೇಳಿರುವ ಲೇಖನವು ಮಹತ್ವದ್ದಾಗಿದೆ.

"ಹೆಳವರು ಜಾನಪದ ವೃತ್ತಿಕಾರರಲ್ಲಿ ಪ್ರಮುಖರಾದವರು, ಲೌಕಿಕ ವೃತ್ತಿ ಗಾಯಕರ ಗುಂಪಿಗೆ ಸೇರುವ ಇವರು ಜನಸಂಖ್ಯಾ ದೃಷ್ಟಿಯಿಂದ ಕಡಿಮೆ ಪ್ರಮಾಣದಲ್ಲಿದ್ದರೂ, ವಿಶಿಷ್ಟ ಸಂಪ್ರದಯದ ದೃಷ್ಟಿಯಿಂದ ಮಹತ್ವ ಪಡೆದಿದ್ದಾರೆ. ಒಕ್ಕಲು ಮನೆಗಳ ವಂಶಾವಳಿಯನ್ನು ಹಾಡಿ ಹೇಳುವುದೇ ಇವರಿಗೆ ವಂಶಪಾರಂಪರ್ಯವಾಗಿ ಬಂದ ಮತ್ತು ವರ್ಷಕ್ಕೊಮ್ಮೆ ಊರೂರು ಸಂಚರಿಸಿ, ಎತ್ತಿನ ಮೇಲೆ ಕುಳಿತು ರೈತರ ಮನೆಗೆ ಹೋಗಿ ಅವರ ವಂಶದ ಗತ ವೈಭವವನ್ನು ಹಾಡಿ ಹೊಗಳಿ, ಅವರು ಕೊಡುವ ಕಾಳು ಕಡ್ಡಿಗಳನ್ನು ಸ್ವೀಕರಿಸಿ ಬರುತ್ತಾರೆ"[೫]

೧೯೭೪ರಲ್ಲಿ ಡಾ.ಜೀ. ಶಂ.ಪರಮಶಿವಯ್ಯನವರ "ಹೆಳವರ ಕಾವ್ಯಗಳು" ಎಂಬ ಕೃತಿಯಲ್ಲಿ ಹೆಳವರನ್ನು ಕುರಿತು ಹೀಗೆ ಹೇಳಿದ್ದಾರೆ. "ಬಹುಮಟ್ಟಿಗೆ ಒಕ್ಕಲು ಮಕ್ಕಳನ್ನು ಆಶ್ರಯಿಸಿ ಬದುಕುವ ಇವರು ಅವರ ಸೋದರ ಸಂಬಂಧವನ್ನೇ ತಮಗೂ ಅರೋಪಿಸಿಕೊಳ್ಳುತ್ತಾರೆ. ಮುಖ್ಯ ಗ್ರಾಮವೊಂದರ ಸಮೀಪದಲ್ಲಿ ನಾಲ್ಕು ಗುಡಿಸಲುಗಳ 'ಹಟ್ಟಿ'ಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಒಬ್ಬೊಬ್ಬ ಹೆಳವನೂ ಕೆಲವು ಹಳ್ಳಿಗಳ ಒಕ್ಕಲುಗಳನ್ನು ತಾನು ಹಂಚಿಕೊಂಡು ತನ್ನ 'ಹಕ್ಕಿ'ನಲ್ಲಿ ವಂಶಪಾರಂಪರ್ಯವಾಗಿ ಉಳಿಸಿಕೊಂಡು ಬಂದಿದ್ದಾನೆ"[೬].

೧೯೭೮ರಲ್ಲಿ ಬಿ.ಬಿ.ಮಹೀಶವಾಡಿಯವರು "ಹೆಳವರ ಹಾಡುಗಳು" ಎಂಬುವುದರಲ್ಲಿ ಹೆಳವರು ಒಕ್ಕಲು ಮನೆಗಳ ವೃತ್ತಾಂತವನ್ನು ಹೇಳುವುದರ ಬಗ್ಗೆ ಈ ರೀತಿ ವಿವರಿಸಿದ್ದಾರೆ.

"ಹೆಳವರು ತಾವು ಹೇಳುವ ಮನೆತನದ ಜನ ಅಥವಾ ವಂಶಜರು ತಮ್ಮ "ಮೂಲ ಸ್ಥಳವನ್ನು ಬಿಟ್ಟು ಬಂದು ಮತ್ತೆ ಯಾವ ಊರಿಗೆ ಬಂದು ನೆಲೆಸಿದರು-ಮುಂತಾದ ವಿವರಗಳನ್ನು ಹೇಳುತ್ತಾರೆ. ಅಲ್ಲಿಂದ ಈಗ ಸದ್ಯ ಇರುವ ಊರಿನ ಉಲ್ಲೇಖ ಮಾಡಿ, ಈ ಊರಲ್ಲಿ ಎಷ್ಟು ತಲೆಮಾರುಗಳಿಂದ ಈ ವಂಶ ಬಂದಿದೆ ಎಂಬುದರ ವಿವರವನ್ನು ಒದಗಿಸಿದ್ದಾರೆ. ಮೂಲ ಪುರುಷನಿಂದ ಹಿಡಿದು ಸದ್ಯದ ಮನೆಯ ಯಜಮಾನನ ಮಕ್ಕಳವರೆಗೂ ವಂಶದ ಪರಂಪರೆ ಯನ್ನು ಪಟ್ಟಿಮಾಡಿ ಹಾಡಿ ಹೊಗಳುತ್ತಾರೆ"[೭].

೧೯೭೭ರಲ್ಲಿ ಗೊ.ರು. ಚನ್ನಬಸಪ್ಪನವರು ಸಂಪಾದಿಸಿದ "ಕರ್ನಾಟಕ ಜನಪದ ಕಲೆಗಳು" ಎಂಬುದರಲ್ಲಿ ಹೆಳವರನ್ನು ಕುರಿತು ಹೀಗೆ ಹೇಳುತ್ತಾರೆ.

"ದಾಯಾದಿ ಸಂಬಂಧ ಹೇಳಿಕೊಂಡು ಊರಿಗೆ ಹೋಗಿ ಮನೆ ಮನೆಯಲ್ಲಿ ವಂಶಾವಳಿಯ ಕಥೆಯನ್ನು ಹೇಳುವ ಇವರು ಹಿಂದಿನ ಮತ್ತು ಮುಂದಿನ ಪೀಳಿಗೆಗೆ ಸೇತುವೆಯಂತೆ ಇದ್ದಾರೆ. ಪ್ರಸಿದ್ಧ ಮನೆತನಗಳ ಇತಿಹಾಸ, ಕಳ್ಳುಬಳ್ಳಿಗಳ ವಿವರಗಳನ್ನು ಅವರ ಬಾಯಿಯಿಂದಲೇ ಕೇಳಬೇಕು. ಹೆಳವರನ್ನು ಅಂತಹ ವಿವರಗಳ 'ಸಂಚಾರಿ ನಿಘಂಟು"[೮] ಎಂದು ಹೇಳಬಹುದು.

೧೯೪೭ರಲ್ಲಿ ಶಂ.ಬಾ ಜೋಶಿಯವರು ತಮ್ಮ "ಎಡೆಗಳು (ಹೇಳುವ) ಕರಿನಾಡ ಕತೆ"ಯಲ್ಲಿ ಹೆಳವರನ್ನು ಕುರಿತು ಹೀಗೆ ಹೇಳಿದ್ದಾರೆ. "ನಮ್ಮ ನಾಡವರ ಮನೆತನದ ಗತ ಇತಿಹಾಸವನ್ನೇಲ್ಲಾ ನೆನಪಿಟ್ಟು ಕತೆ ಮಾಡಿ ಹೇಳುವ ಒಂದು ವರ್ಗವೆ ಇದೆ. ಇವರೆ ನಮ್ಮ ನಾಡಿನ ಪರಂಪರಾಗತವಾದ ಇತಿಹಾಸಕಾರರು – ಅಹುದು. ಒಂದೊಂದು ಮನೆತನಕ್ಕೂ ಕಾಲಕಾಲಕ್ಕೆ ಬಂದು ಅವರ ಹಿರಿಯರ ಬಿರುದಾವಳಿ, ಪೂರ್ವಚರಿತ್ರೆಗಳೆಲ್ಲವನ್ನೂ ಚೆನ್ನಾಗಿ ಬಣ್ಣ ಬಳಿದು ಮನಸೆಳೆವಂತೆ ಹೇಳುವಲ್ಲಿ ಇವರು ಗಟ್ಟಿಗರು. ಇದಕ್ಕಾಗಿ ಇವರು ಉಂಬಳಿ, ಮಾನ್ಯಗಳನ್ನು ಪಡೆದುದೂ ಉಂಟು."[೯]

ಮಲ್ಲಿಕಾರ್ಜುನ ಹುಲಗಣ್ಣನವರ ತಾವು ರಚಿಸಿದ "ಜನಪದ ಸಾಹಿತ್ಯದಲ್ಲಿ ಹೆಳವ ಜನಾಂಗದ ಸಾಹಿತ್ಯ ಹಾಗೂ ಪರಂಪರೆ' ಎಂಬ ಲೇಖನದಲ್ಲಿ "ಮೈಸೂರು ಸಂಸ್ಥಾನ ಮಹಾರಾಜರ ಕಾಲದಲ್ಲಿ ಪ್ರತಿನಿತ್ಯ ಅರಮನೆ ಎದುರು ಪ್ರಾತಃ ಕಾಲಕ್ಕೆ ಎತ್ತಿನ ಮೇಲೆ ಕುಳಿತು 'ಹೆಳವ' ಹೊಗಳುತ್ತಿದ್ದ ಪರಿಪಾಠವಿತ್ತು ದಸರಾ ಮೆರವಣಿಗೆಯಲ್ಲೂ ಹೆಳವನಿಗೆ ಅಷ್ಟೆ ಮಹತ್ವದ ಕಾಯಕವಿತ್ತು. ಅವರ ಅರಮನೆಯ ಒಳಭಾಗದಲ್ಲಿ ಇರುವ ತೈಲವರ್ಣದ ಚಿತ್ರಗಳಲ್ಲಿ ಪ್ರಪ್ರಥಮ ಕಾಯಕವಿತ್ತೇ ಇರುವುದು ಎತ್ತಿನ ಮೇಲೆ ಕುಳಿತ ಹೆಳವನದು"[೧೦] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಈ ವಿಷಯದ ಕುರಿತು ಯಾವುದೇ ಆಧಾರ ಇಲ್ಲಿಯವರೆಗೂ ದೊರೆತಿಲ್ಲ.

೧೯೮೩ರಲ್ಲಿ ಎಸ್.ರಾಮಸ್ವಾಮಿಯವರು ಜನಪದ ಪತ್ರಿಕೆಯಲ್ಲಿ "ಹೆಳವ ಜನಾಂಗ ಒಂದು ಪರಿಚಯ" ಎಂಬ ಲೇಖನದಲ್ಲಿ ಹೆಳವ ಜನಾಂಗವು ಹುಟ್ಟಿಕೊಂಡಿರುವ ಬಗ್ಗೆ ಹೀಗೆ ಹೇಳಿದ್ದಾರೆ. "ಕ್ರಿ.ಶ.೧೫೩೦ರಲ್ಲಿ ಬಿಜಾಪುರ ಜಿಲ್ಲೆಯ ಬಾದಾಮಿಯಲ್ಲಿ ಶ್ರೀ.ಶಂಕರಪ್ಪಾ ಎಂಬುವರ ಮಾದಪ್ಪಗೌಡ ಎಂಬುವನಿಂದ ಜನಿಸಿದನು. ಇವರು ಗೌಡ ಮನೆತನಕ್ಕೆ ಸೇರಿದ್ದು ಕೃಷಿಯಿಂದ ಜೀವನ ಸಾಗಿಸುತ್ತಿದ್ದರು. ಶ್ರೀ.ಮಾದಪ್ಪಗೌಡ ಎಂಬುವವರಿಗೆ ಮೂರು ಜನ ಗಂಡು ಮಕ್ಕಳಿದ್ದು ಒಂದನೇ ಶ್ರೀ. ಶಂಕರಪ್ಪನವರು ಜನಿಸುವಾಗಲೇ ಅಂಗವಿಕಲನಾಗಿ ಜನಿಸಿದರು. ಕನ್ನಡದಲ್ಲಿ ಹೆಳವ ಅಂದರೆ ಕಾಲು ಇಲ್ಲದವ ಎಂದು ಅರ್ಥ. ಶ್ರೀ.ಶಂಕರಪ್ಪನವರಿಗೆ ೧೫೮೫ರಲ್ಲಿ ಶ್ರೀಮತಿ.ಮಾದಮ್ಮ ಎಂಬುವರೊಂದಿಗೆ ಮದುವೆಯಾಯಿತು. ಈತನಿಗೆ ೫ ಜನ ಮಕ್ಕಳು ಇವನು ಕುಂಟನಾದ್ದರಿಂದ, ಇವನ ತಂದೆ, ಅಣ್ಣ ತಮ್ಮಂದಿರು ಪ್ರತಿ ವರ್ಷ ದವಸ ಧಾನ್ಯಗಳನ್ನು ಕೊಡುತ್ತಿದ್ದರು.[೧೧]

೧೯೯೩ರಲ್ಲಿ ಹರಿಲಾಲ್ ಪವಾರರವರು 'ಹೆಳವರ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಹೆಳವರನ್ನು ಕುರಿತು ಹೀಗೆ ಹೇಳಿದ್ದಾರೆ. "ಕರ್ನಾಟಕದ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳಲ್ಲಿ ಹೆಳವರದು ಒಂದು ಸಮುದಾಯವಿದ್ದು. ಇವರು ವಿವಿಧ ಪ್ರದೇಶಗಳಿಗೆ ಹೋಗಿ ಅಲ್ಲಿರುವ ಪ್ರಭಾವಿ ಮನೆತನಗಳ ಕುಲವನ್ನು ತಮ್ಮ ಸ್ಮರಣೆಯಿಂದಲೇ ಕೊಂಡಾಡಿಬರುತ್ತಿದ್ದರು. ಕಾಲಾನಂತರದಲ್ಲಿ ಚಪ್ಪೋಡುಗಳಲ್ಲಿ ವಂಶಾವಳಿಯನ್ನು ದಾಖಲಿಸಿಕೊಳ್ಳತೊಡಗಿದರು. ಕುಲ ಕೊಂಡಾಡುವುದನ್ನೇ ತಮ್ಮ ಪ್ರಮುಖ ವೃತ್ತಿಯನ್ನಾಗಿಸಿಕೊಂಡ ಹೆಳವರು ಎಂತಹ ಕಷ್ಟಗಳು ಎದುರಾದರೂ ತಮ್ಮ ವೃತ್ತಿಯನ್ನು ಹಾಗೆ ಮುಂದುವರಿಸಿಕೊಂಡು ಬಂದರೆಂದು ಹೇಳುತ್ತಾರೆ."[೧೩]

೨೦೦೩ರಲ್ಲಿ ಎ.ಎಸ್. ಪ್ರಭಾಕರ್‌ರವರು ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಸಲ್ಲಿಸಿದ 'ಹೆಳವರು' ವರದಿಯಲ್ಲಿ ಇದುವರೆಗೆ ನಡೆದ ಅಧ್ಯಯನಗಳನ್ನು ಗಮನಿಸಿ ಹೆಳವರೆಂದರೆ ಯಾರು? ಅವರಿಗೇಕೆ ಈ ಹೆಸರು ಬಂದಿತು ಎಂಬುವುದನ್ನು ಕುರಿತು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

"ಹೆಳವರ ಮೂಲ ಪುರುಷ "ಹೆಳವ" ಅಂಗವಿಕಲನಾಗಿದ್ದು ಅವನು ಭಿಕ್ಷೆ ಬೇಡುತ್ತಾ ಬದುಕಿದ್ದರಿಂದ ಮತ್ತು ಅವನ ನಂತರ ಅವನ ಮಕ್ಕಳು, ಮೊಮ್ಮಕ್ಕಳು ಅದೇ ವೃತ್ತಿಯನ್ನು ಮುಂದುವರಿಸಿದ್ದರಿಂದ ಅವನ ವಂಶಸ್ಥರಿಗೆ "ಹೆಳವ" ಎಂಬ ಹೆಸರು ಬಂದಿತು".[೧೪]

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಒಕ್ಕಲು ಮನೆಗಳಿಗೆ ಹೋಗಿ ಹೇಳುವವರೇ ನಂತರದಲ್ಲಿ 'ಹೆಳವ'ರಾದರು. ಮತ್ತು ಹೆಳವರ ಮೂಲ ಪುರುಷ ಕುಂಟನಿದ್ದು ಅವನ ಸಂತತಿಯವರೆಲ್ಲ 'ಹೆಳವ'ರೆಂದು ಕರೆಸಿಕೊಳ್ಳತೊಡಗಿದರು. ಎಂಬ ಅಂಶವು ಹೆಚ್ಚು ವಾಸ್ತವ ಎನ್ನಿಸುತ್ತದೆ.

**ಹೆಳವ ಸಮುದಾಯದ ಚಾರಿತ್ರಿಕತೆ**

ಮಾನವ ತನ್ನ ಐತಿಹಾಸಿಕವಾದ ಮಹಾನ್ ನಡಿಗೆಯಲ್ಲಿ ದಾಪುಗಾಲಿರಿಸುತ್ತಾ ಇದೀಗ ನಾಗರಿಕತೆಯ ಉನ್ನತ ಮಟ್ಟಕ್ಕೆ ಬಂದು ತಲುಪಿದ್ದಾನೆ. ಹಾಗೆಂದ ಮಾತ್ರಕ್ಕೆ ಇಡೀ ಜಗತ್ತಿನ ಎಲ್ಲೆಡೆಯಲ್ಲಿಯೂ ಕಾಣಬರುವ ಮಾನವ ಸಮೂಹ-ಸಮುದಾಯಗಳು ನಾಗರಿಕತೆಯ ಈ ಹಂತಕ್ಕೆ ಬಂದು ತಲುಪಿವೆ ಎನ್ನುವಂತಿಲ್ಲ. ನಾಗರಿಕತೆಯ ಗಂಧ-ಗಾಳಿಯನ್ನೇ ತಿಳಿಯದ ಇನ್ನೂ ನರಮಾಂಸ ಭಕ್ಷಕ ಸ್ಥಿತಿಯಲ್ಲಿರುವ ನ್ಯೂಗಿನಿಯ ಮುಂಡುಗುಮುರ್ ಸಮುದಾಯದಿಂದ ಹಿಡಿದು ಮಂಗಳ ಗ್ರಹದತ್ತ ಹೋಗಿ ನೆಲೆಸಲು ಪ್ರಯತ್ನ ನಡೆಸುತ್ತಿದ್ದು ನಾಗರಿಕತೆಯ ಅತ್ಯಂತ ಉನ್ನತ ಶಿಖರದಲ್ಲಿರುವ ಅಮೇರಿಕದ ಜನಸಮೂಹದವರೆಗೆ ಜೀವನ ನಡಿಗೆಯ ಅನ್ಯಾನ್ಯ ಹಂತಗಳಲ್ಲಿರುವ ಜನಸಮೂಹಗಳು ಎಲ್ಲಾ ಕಡೆ ಹರಡಿವೆ. ಇಂತಹ ಸಮೂಹಗಳಲ್ಲಿ ನಾಗರಿಕತೆಯಿಂದ ಬಹು ದೂರವಿರುವ ಹಾಗೂ ಇನ್ನೂ ಅಕ್ಷರ-ಪೂರ್ವ ಸ್ಥಿತಿಯಲ್ಲಿರುವ ಸಮುದಾಯಗಳ ಸಂಖ್ಯೆಯೂ ಕಡಿಮೆಯೇನಿಲ್ಲ. ಮೂಲನಿವಾಸಿಗಳೆಂದು, ಆದಿವಾಸಿಗಳೆಂದು,

ಅಲೆಮಾರಿಗಳೆಂದು ಕರೆಯಲಾಗುತ್ತಿರುವ ಇಂತಹ ಸಮೂಹಗಳು ಇಲ್ಲದ ದೇಶವೇ ಇಲ್ಲ ಎನ್ನಬಹುದು. ಜನಸಂಖ್ಯೆಯ ದೃಷ್ಟಿಯಿಂದ ಬಹಳ ಅಲ್ಪಸಂಖ್ಯಾತರಾದ ಈ ಜನಸಮುದಾಯಗಳ ಜೀವನ ಕ್ರಮವನ್ನು ಅಧ್ಯಯನ ಮಾಡುವುದು ಕುತೂಹಲದ ವಿಷಯ ಮತ್ತು ಸವಾಲಿನ ಪ್ರಶ್ನೆ ಕೂಡ ಆಗಿದೆ.

ಮಾನವನು ಪ್ರಾರಂಭದಲ್ಲಿ ಗೆಡ್ಡೆ ಗೆಣೆಸುಗಳನ್ನು ತಿನ್ನುತ್ತಾ ಅಲೆಮಾರಿಯಾಗಿ ಅಲೆಯುತ್ತಿದ್ದನು. ಆಗ ಇಡೀ ಪ್ರಕೃತಿಯೇ ಅವನ ಮನೆಯಾಗಿತ್ತು. ಅವನಲ್ಲಿ ಯಾವುದೇ ದುರಾಸೆ, ದುರ್ಗುಣಗಳಿಲ್ಲದೆ ಸ್ವತಂತ್ರವಾಗಿ ಜೀವಿಸುತ್ತಿದ್ದನು. ಅಂದು ಅವನ ಬೇಕು ಬೇಡಿಕೆಗಳು ಸಹ ಸಿಮಿತವಾಗಿದ್ದವು. ಆದರೆ ಸಮಾಜವು ನಿಂತ ನೀರಿನಂತಿರದೆ ನಿತ್ಯಪರಿವರ್ತನಶೀಲವಾಗಿರುವುದರಿಂದ ಕಾಲ ನಂತರದಲ್ಲಿ ಅವನ ಮನೋಭಾವನೆಗಳು ಕೂಡ ಬದಲಾಗತೊಡಗಿದವು. ಖಾಸಗಿ ಆಸ್ತಿ ಕಲ್ಪನೆ, ಕುಟುಂಬದ ಕಲ್ಪನೆ ಮಾನವನಲ್ಲಿ ಮೂಡಿದಂತೆ ಅವನ ಬೇಕು ಬೇಡಿಕೆಗಳು, ದುರಾಸೆಗಳು ಹೆಚ್ಚತೊಡಗಿದವು. ಮಾನವೀಯತೆ ಮಾಯವಾಗತೊಡಗಿತು. ಸಹಕಾರ, ಸಹಬಾಳ್ವೆ ಕಲ್ಪನೆ ದೂರವಾಗಿ ಒಬ್ಬರಿಗೊಬ್ಬರು ಅಡಿಯಾಳಾಗಿಸಿಕೊಳ್ಳಲು ಹವಣಿಸತೊಡಗಿದರು. ಇದು ಕೇವಲ ಭಾರತೀಯ ಸಮಾಜಕ್ಕೆ ಮಾತ್ರ ಸಿಮೀತವಾಗಿರದೆ ಪ್ರಪಂಚದಾದ್ಯಂತ ಮಾರಕ ರೋಗವಾಗಿ ಹರಡಿದೆ.

ಭಾರತವನ್ನು ಒಳಗೊಂಡತೆ ಜಗತ್ತಿನ ಎಲ್ಲಾ ಸಮಾಜಗಳಲ್ಲಿ ಸೌಲಬ್ಯ ಉಳ್ಳವರು ಮತ್ತು ಸೌಲಬ್ಯ ವಂಚಿತರು, ಉಳ್ಳವರು ಮತ್ತು ಇಲ್ಲದವರು, ಮುಂದುವರಿದ ವರ್ಗಗಳು ಮತ್ತು ಹಿಂದುಳಿದ ವರ್ಗಗಳು ಎಂಬ ವಿಭಿನ್ನ ವ್ಯತ್ಯಾಸಗಳಿಂದ ಕೂಡಿದ ಸ್ತರಗಳು ಹುಟ್ಟಿಕೊಂಡವು. ಸಮಾಜಗಳಲ್ಲಿನ ತಾರತಮ್ಯ ಸ್ಥಿತಿಯನ್ನು ನೋಡಿದ ಸಾರೋಕಿನ್‌ರವರು "ಜಗತ್ತಿನ ಎಲ್ಲಾ ಸಂಘಟಿತ ಸಮಾಜಗಳೂ ಸ್ತರವಿನ್ಯಾಸದಿಂದ ಕೂಡಿವೆ"[೧೪] ಎಂದಿದ್ದಾರೆ. ಹೀಗೆ ಅಸಮಾನತೆಯನ್ನು ಹೊಂದಿದ ಸಮಾಜವು ಸಮಾನತೆಯನ್ನು ಹೊಂದಿ ಎಲ್ಲರಿಗೂ ಒಂದೇ ರೀತಿಯ ಸ್ಥಾನಮಾನ,ಸೌಲಬ್ಯ ಸವಲತ್ತುಗಳು ಹಾಗು ಸಾಮಾಜಿಕ ಮನ್ನಣೆಯನ್ನು ನೀಡುವುದಕ್ಕೆ ಮತ್ತೆ ಸಾಧ್ಯವಾಗಲೇ ಇಲ್ಲ.

ಎಲ್ಲ ಸಮಾಜಗಳು ಸಿರಿವಂತರು, ಸ್ಥಿತಿವಂತರನ್ನು ಹೊಂದಿರುವಂತೆ ದೀನರು, ದುರ್ಬಲರು, ಶೋಷಿತರು, ದುಃಖಿತರು,ದೌರ್ಜನ್ಯಗಳಿಗೆ ಒಳಗಾದವರನ್ನು ಹೊಂದಿದೆ. ಪ್ರಾಚೀನ ರೋಮ ದೇಶದಲ್ಲಿ 'ಪೆಬ್ಲಿಯನ್ನರು' ಈಜೀಪ್ಟನಲ್ಲಿ 'ಗುಲಾಮರು' ಹಾಗು ಇತ್ತೀಚಿನ ಜರ್ಮನಿಯಲ್ಲಿ 'ಯಹೂದಿಗಳು' ದಕ್ಷಿಣ ಅಮೇರಿಕ ಮತ್ತು ಆಫ್ರೀಕಾಗಳ'ಲ್ಲಿ 'ನೀಗ್ರೋಗಳು' ಪಾಕಿಸ್ತಾನದಲ್ಲಿ 'ಹಿಂದೂಗಳು' ಶೋಷಣೆಗೆ, ದೌರ್ಜನ್ಯಕ್ಕೆ ಬಲಿಯಾಗುತ್ತಲೆ ಬಂದಿದ್ದಾರೆ. ಭಾರತದಲ್ಲಿ ಹರಿಜನರು,ಗಿರಿಜನರು ಮತ್ತು ಅಲೆಮಾರಿಗಳು ಬಹಳ ದಿನಗಳಿಂದಲೂ ಹಲವಾರು ಸಮಸ್ಯೆ ಮತ್ತು ಸಂಕಷ್ಟಗಳ ಸುಳಿಗೆ ಸಿಲುಕುತ್ತಲೇ ಬಂದಿದ್ದಾರೆ. ಈ ವರ್ಗಗಳು ಇತರ ವರ್ಗಗಳಿಗೆ ಹೋಲಿಸಿದಾಗ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಬಹಳ ಹಿಂದುಳಿದಿದ್ದು ಮೆಲ್ವರ್ಗಗಳ ತುಳಿತಕ್ಕೆ,ಶೋಷಣೆಗಳಿಗೆ, ದೌರ್ಜನ್ಯಗಳಿಗೆ ಬಲಿಯಾಗುತ್ತಲೇ ನಡೆದಿದ್ದಾರೆ.

ಪ್ರಾರಂಭದಲ್ಲಿ ಸಮಾಜದಲ್ಲಿ ಸ್ತರವಿನ್ಯಾಸವಿರಲಿಲ್ಲವೆಂದು ಹೇಳಲಾಗದು. ಇದ್ದರೂ ಕೂಡ ಅದು ಅಷ್ಟು ಬಿಗುವಿನಿಂದ ಕೂಡಿರಲಿಲ್ಲ. ಯಾವಾಗ ಹಾಲೆಂಡನಿಂದ ತಳ್ಳಲ್ಪಟ್ಟ ಆರ್ಯನ್ನರು ಬಲೂಚಿಸ್ಥಾನದ ಮೂಲಕ ಭಾರತಕ್ಕೆ ಆಗಮಿಸಿದರೋ ಅಂದಿನಿಂದ ಭಾರತದ ವಾತಾವರಣವೇ ಬದಲಾಯಿತು. ಅವರು ಬಂದ ಸಂದರ್ಭದಲ್ಲಿ ಭಾರತೀಯರನ್ನು ಕೃಷಿಯಲ್ಲಿ ಅಂಬೆಗಾಲಿಡುತ್ತಾರೆ. ಇವರಲ್ಲಿ ಯಾವುದೇ ಕೃಷಿ ಉಪಕರಣಗಳು ಇರಲಿಲ್ಲ. ಆದರೆ ಆರ್ಯನ್ನರು ಕೃಷಿ ಉಪಕರಣಗಳನ್ನು ಬಲ್ಲವರಾಗಿದ್ದರಿಂದ ಇಲ್ಲಿಯ ಮೂಲ ನಿವಾಸಿಗಳನ್ನು ಸೋಲಿಸಿ ತಮ್ಮ ಅಡಿಯಾಳುಗಳನ್ನಾಗಿಸಿ ಕೊಂಡರು. ಅಲ್ಲದೇ ಒತ್ತಾಯಪೂರ್ವಕವಾಗಿ ಕೆಲವು ವೃತ್ತಿಗಳನ್ನು ಇವರಿಗೆ ವಹಿಸಿದರು. ಒಂದು ರೀತಿಯಲ್ಲಿ ಇದು ಗೆದ್ದ ಗುಂಪುಗಳ ಆರ್ಥಿಕ ಹಿಡಿತವೇ ಆಗಿತ್ತು. ಯಾವ ಉತ್ಪಾದನಾ ವಿಧಾನದಿಂದ ಸಮಾಜದಲ್ಲಿ ಅಧಿಕ ಉತ್ಪಾದನೆಯಾಗುವುದೋ ಅಂತಹವುದರ ಮೇಲೆ ಶಾಶ್ವತ ಹಿಡಿತ ಸಾಧಿಸುವುದು ಗೆದ್ದ ಸಮುದಾಯಗಳ ಉದ್ದೇಶವಾಗಿತ್ತು. ಅದಕ್ಕಾಗಿ ಗೆದ್ದ ಗುಂಪುಗಳು ಸೋತ ಗುಂಪುಗಳಿಗೆ ಒತ್ತಾಯ ಪೂರ್ವಕವಾಗಿ ವೃತ್ತಿಗಳನ್ನು ವಿಧಿಸಿದ್ದಲ್ಲದೆ ಪರಂಪರೆಯ ಹೆಸರಲ್ಲಿ ಅವರ ವೃತ್ತಿಗಳನ್ನು ಪೋಷಿಸುತ್ತಲೇ ಬಂದಿವೆ. ಇದರಿಂದಾಗಿಯೇ ಪ್ರಪಂಚವು ತಾಂತ್ರಿಕವಾಗಿ, ವೈಜ್ಞಾನಿಕವಾಗಿ ಎಷ್ಟು ಮುಂದುವರೆದಿದ್ದರೂ ಕೂಡ ಭಾರತ ಮಾತ್ರ ಪಾರಂಪರಿಕ ವೃತ್ತಿಗಳನ್ನು ಜಾತಿಯ ರೂಪಕೊಟ್ಟು ಅದನ್ನು ಸಮರ್ಥಿಸುತ್ತಲೇ ಬಂದಿದೆ. ಮೇಲ್ವರ್ಗಗಳು ಮಾತ್ರ ಸಕಲ ಸವಲತ್ತುಗಳನ್ನು ಅನುಭವಿಸುತ್ತಾ ಕೆಳವರ್ಗದವರ ಮುಗ್ಧತೆಯನ್ನೇ ದುರುಪಯೋಗಪಡಿಸಿಕೊಂಡು ಅವರ ಸೃಷ್ಠಿ ಪುರಾಣಗಳನ್ನು ಕೆಟ್ಟದಾಗಿ ರೂಪಿಸಿ ಅವರು ಹಿಂದೆ ಮಾಡಿದ ತಪ್ಪಿನ ಪ್ರತಿಫಲವಾಗಿ ಈ ರೀತಿಯ ಜೀವನ ಸಾಗಿಸಬೇಕಾಗಿದೆ ಎಂಬಂತಹ ಸ್ಥಿತಿ ಸೃಷ್ಠಿಸಿದ್ದಾರೆ.

ಇವತ್ತು ಅಲೆಮಾರಿಗಳಾಗಿ ಬದುಕುತ್ತಿರುವ ಅನೇಕ ಸುದಾಯಗಳು ಹಿಂದಿನ ಕಾಲದಿಂದಲೂ ಯಾವುದೇ ನಿರ್ದಿಷ್ಟ ಆದಾಯ ಬರುವ ಆಸ್ತಿ ಅಥವಾ ವೃತ್ತಿಗಳಲ್ಲದೆ ಆರ್ಥಿಕವಾಗಿ ಅಲೆಮಾರಿಗಳು ಉತ್ಪಾದಕ ಸಮುದಾಯಗಳನ್ನು ಅವಲಂಬಿಸಿ ಬದುಕುವುದು ಅನಿವಾರ್ಯವಾಗಿತ್ತು.

ಭಾರತದ ಮೂಲ ವೃತ್ತಿ ಕೃಷಿಯಾಗಿದ್ದರೂ ಅಲೆಮಾರಿಗಳು ಅದನ್ನು ಮಾಡುವ ಸ್ಥಿತಿಯಲ್ಲಿರಲಿಲ್ಲ. ಹೀಗಾಗಿ ಇವರಿಗೆ ದಾನವಾಗಿ ದತ್ತಿ ಜಮೀನು ಕೊಟ್ಟರೋ ಅದನ್ನು ಕೃಷಿ ಮಾಡಲಾಗದಿದ್ದರಿಂದ ಕೆಲವರು ಮಾರಿಕೊಂಡರು ಇನ್ನು ಕೆಲವರ ಭೂಮಿ ಮತ್ತೆ ಜಮೀನ್ದಾರ ರೈತರ ಪಾಲಾಯಿತು.

ಹಿಂದೆ ಎರಡು ರೀತಿಯ ಜಮೀನನ್ನು ದಾನವಾಗಿ ನೀಡಲಾಗುತ್ತಿತ್ತು.

"೧. ಗ್ರಾಮದ ಕೃಷಿ ಉತ್ಪಾದಕರಿಗೆ ಸಹಾಯಕರಾಗಿದ್ದ ಭೂರಹಿತ ಸಮುದಾಯಗಳಿಗೆ ನೀಡುತ್ತಿದ್ದ ದಾನದ ಜಮೀನು.

೨. ಪುರೋಹಿತರಿಗೆ, ಮಠಗಳಿಗೆ ನೀಡುತ್ತಿದ್ದ ದಾನದ ಜಮೀನು."[೧೩]

ಹೀಗೆ ಅಲೆಮಾರಿಗಳಿಗೆ ಮತ್ತು ಕುಶಲಕಾರ್ಮಿಕರಿಗೆ ದಾನವಾಗಿ ಜಮೀನು ಕೊಟ್ಟರು

ಸಹ ಅದನ್ನು ಉಳುಮೆ ಮಾಡುವ ಸ್ಥಿತಿಯಲ್ಲಿಲ್ಲದ ಕಾರಣ ಇವರು ಆ ಜಮೀನನ್ನು ಗ್ರಾಮದ ಮೇಲ್ವರ್ಗದವರಿಗೆ ನೀಡಿ ವರ್ಷಕ್ಕೊಂದು ಬಾರಿ ಅಲ್ಲಿಗೆ ಹೋಗಿ ಅವರು ಕೊಟ್ಟ ಪಾಲನ್ನು ಪಡೆಯುತ್ತಿದ್ದರು. ಅದರೂ ಗ್ರಾಮದ ಮುಖಂಡ ಮತ್ತು ತಾವು ಉಳುಮೆಗೆ ಕೊಟ್ಟ ಜಮೀನಿನ ರೈತರು ಮೇಲ್ವರ್ಗದವರಾಗಿದ್ದರಿಂದ ಅವರ ಇಚ್ಛೆಗೆ ವಿರುದ್ಧವಾಗಿ ನಡೆದುಕೊಂಡಲ್ಲಿ ಸಾಕಷ್ಟು ಸಮಸ್ಯೆಗಳನ್ನು ಅನುಭವಿಸಬೇಕಾಗಿತ್ತು.

ವೃತ್ತಿಗಾಯಕರು ಮತ್ತು ಪ್ರದರ್ಶಕ ಕಲೆಗಳನ್ನು ಹೊಂದಿದ್ದ ಸಮುದಾಯಗಳು ಮೇಲ್ವರ್ಗದವರು ಬಯಸಿದಾಗಲೆಲ್ಲ ಹೋಗಿ ಹಾಡಿ, ಕುಣಿದು, ಅವರಿಗೆ ಮನರಂಜನೆ ನೀಡಬೇಕಾಗಿತ್ತು. ಇದಕ್ಕೆ ಪ್ರತಿಯಾಗಿ ಅವರು ಕೆಲವು ಕಾಣಿಕೆ ಮತ್ತು ತಮ್ಮ ಜಮೀನಿನಲ್ಲಿ ಬೆಳೆದ ದವಸ, ಧಾನ್ಯಗಳನ್ನು ನೀಡುತ್ತಿದ್ದರು. ಕೆಳ ಸಮುದಾಯಗಳು ಆರ್ಥಿಕವಾಗಿ ಸದಾ ಅವರನ್ನು ಅವಲಂಬಿಸುವುದು ಅನಿವಾರ್ಯವಾಗಿತ್ತು. ಹೀಗೆ ಜೀವನ ನಡೆಸುವಷ್ಟರಲ್ಲಿ ಭೂಮಿ ಮುಖ್ಯ ಆರ್ಥಿಕ ಮೂಲವಾದೊಡನೆ ಅವರನ್ನೇ ನಂಬಿದ್ದ ಕೆಳ ಸಮುದಾಯಗಳ ಸ್ಥಿತಿ ತುಂಬಾ ಚಿಂತಾಜನಕವಾಯಿತು. ಅಲೇದಾಟ ಮತ್ತೇ ಪ್ರಾರಂಭವಾಯಿತು.

ಭಾರತಕ್ಕೆ ಮೊಘಲರು ಆಗಮಿಸಿದ ಮೇಲೆ ಕೃಷಿ ಮೇಲೆ ಸಾಕಷ್ಟು ನಿಯಮಗಳನ್ನು ವಿಧಿಸಿದರು. ನಂತರ ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಆಡಳಿತ ವಹಿಸಿಕೊಂಡ ಮೇಲೆ ಅಲೆಮಾರಿಗಳು ತುಂಬಾ ಕಷ್ಟಕರ ಪರಿಸ್ಥಿತಿ ಎದುರಿಸಬೇಕಾಯಿತು. ಮೊಘಲರ ಆಳ್ವಿಕೆಯಲ್ಲಿ ಸಾಕಷ್ಟು ಸಮಸ್ಯೆ ಅನುಭವಿಸಿದ್ದ ಇವರು ಅಧೋಗತಿಗೆ ಇಳಿದು ಹೋದರು. ಏಕೆಂದರೆ ಬ್ರಿಟಿಷರ ಮೂಲ ಉದ್ದೇಶ ಭಾರತದ ಸಂಪತ್ತುನ್ನು ಕೊಳ್ಳೆಹೊಡೆಯುವದಾಗಿದ್ದರಿಂದ ೧೭೯೩ರಲ್ಲಿ ಶಾಶ್ವತ ಜಮೀನ್ದಾರಿ ಕಾಯ್ದೆಯನ್ನು ಮತ್ತು ೧೮೭೧ರಲ್ಲಿ ಅಪರಾಧಿ ಬುಡಕಟ್ಟುಗಳ ಕಾಯ್ದೆಗಳಂತಹ ಅಮಾನುಷ ಕಾಯ್ದೆಗಳನ್ನು ಜಾರಿಗೆ ತಂದಿದ್ದರಿಂದ ಅಲೆಮಾರಿ ಗಾಯಕ ಪರಂಪರೆಯ ಸಮುದಾಯ ಮತ್ತು ಪ್ರದರ್ಶನ ಕಲೆಗಳನ್ನು ಅವಲಂಬಿಸಿದ್ದ ಸಮುದಾಯಗಳು ನಿರಾಶ್ರಿತವಾದವು. ೧೯೫೨ರಲ್ಲಿ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ರದ್ದುಗೊಳಿಸಿ ವಿಮುಕ್ತ ಬುಡಕಟ್ಟುಗಳೆಂದು ಕರೆಯಲಾಯಿತು. ಆದರೂ ಇವರ ಪರಿಸ್ಥಿತಿ ಬದಲಾಗಲಿಲ್ಲ.

ಹೆಳವರ ಸಮುದಾಯದವರು ಕೂಡ ಈ ಎಲ್ಲಾ ಹಂತಗಳನ್ನು ದಾಟಿ ಬಂದಿದ್ದಾರೆ. ಇಂದಿಗೂ ಕೂಡ ಇವರು ಭೂಮಾಲಿಕರನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಇವರಲ್ಲಿರುವ ಪುರಾಣ ಕಥೆಗಳೇ ಇದಕ್ಕೆ ಆಧಾರವಾಗಿವೆ. ಅನೇಕ ಪಾರಂಪರಿಕ ವೃತ್ತಿಯ ಜನ ಇಂದಿನ ಆಧುನಿಕ ಸಮಾಜದಲ್ಲಿ ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಆಧುನಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿ ತಮ್ಮ ಮೂಲ ರೂಪವನ್ನೇ ಕಳೆದುಕೊಂಡಿರುವ ಸಂದರ್ಭದಲ್ಲಿ ಹೆಳವರಲ್ಲಿ ಇಂದಿಗೂ ಎಷ್ಟೋ ಜನ ತಮ್ಮ ಪಾರಂಪರಿಕ ವೃತ್ತಿಯನ್ನು ಅವಲಂಬಿಸಿ ಬದುಕುತ್ತಿರುವುದು ನಿಜಕ್ಕೂ ಆಶ್ಚರ್ಯವೆನಿಸುತ್ತದೆ.

**ಹೆಳವ ಸಮುದಾಯದ ಪಂಗಡಗಳು**

ಭಾರತೀಯ ಸಮಾಜದಲ್ಲಿ ಪ್ರತಿಯೊಂದು ಸಮುದಾಯವು ಒಟ್ಟಿಗೆ ಇದ್ದುಕೊಂಡು ಬೆಳೆದು ಬಂದಿವೆ. ತಮ್ಮದೇ ಸಾಮಾಜಿಕ ಕಟ್ಟುಪಾಡುಗಳೊಂದಿಗೆ ಜೀವಿಸುತ್ತಿವೆ. ಮಾನವನ ದೈಹಿಕ

ಮತ್ತು ಭೌದ್ಧಿಕ ವಿಕಾಸವಾದಂತೆಲ್ಲಾ ತನ್ನ ಮನೋಭಾವನೆಗಳಿಗೆ ಅನುಗುಣವಾಗಿ ಬದುಕನ್ನು ರೂಪಿಸಿಕೊಂಡ ಹಾಗೂ ತನ್ನ ಮನೋಧರ್ಮಕ್ಕೆ ಒಪ್ಪುವ ಧರ್ಮವನ್ನು ಸ್ವೀಕರಿಸಿ ಒಂದು ಪ್ರತ್ಯೇಕವಾದ ಸಮುದಾಯವನ್ನು ರೂಪಿಸಿಕೊಂಡಿವೆ. ಒಂದೇ ಸಮುದಾಯದಲ್ಲಿ ಆಚಾರ ವಿಚಾರಗಳು, ವೃತ್ತಿಗಳು ಭಿನ್ನವಾಗುತ್ತಲೇ ಆ ಸಮುದಾಯದಲ್ಲಿಯೇ ಪಂಗಡ ಹಾಗೂ ಉಪಪಂಡಗಳು ಉದ್ಭವಿಸಲು ಕಾರಣವಾಗಿವೆ. ಭಾರತೀಯ ಸಮಾಜದಲ್ಲಿ ಅದೂ ಹಿಂದೂ ಧರ್ಮದಲ್ಲಂತು ಸಾಮಾಜಿಕ, ಧಾರ್ಮಿಕ ರೀತಿ-ನೀತಿಗಳಿಂದಾಗಿ ಮತ್ತು ರಕ್ತ ಸಂಬಂಧದ ಆಧಾರದಲ್ಲಿ ಹಾಗೂ ವೃತ್ತಿಯ ಆಧಾರದಲ್ಲಿ ಒಂದೇ ಸಮುದಾಯ ಅಥವಾ ಜಾತಿಯಲ್ಲಿ ವಿವಿಧ ಪಂಗಡ ಹಾಗೂ ಉಪಪಂಡಗಳಾಗಿ ವಿಭಜಿಸಲಾಗಿದೆ. ಇದು ಒಂದು ಬಗೆಯ ಸಾಮಾಜಿಕ ವರ್ಗೀಕರಣವಾಗಿದ್ದು ಜನತೆಯೇ ಪಾಲಿಸುವಂತಾಗಿದೆ.

ಹೆಳವರ ಮೂಲ ವೃತ್ತಿ ವಂಶಾವಳಿ ಹೇಳುವುದಾಗಿದ್ದು ಈಗಿನಂತೆ ಹಿಂದೆ ಉಪಪಂಡಗಳು ಇದ್ದಿರಲಿಲ್ಲವೆನ್ನಬಹುದು ಕಾಲಾನಂತರದಲ್ಲಿ ಹೆಳವರು ನಿಶ್ಚಿತ ಆರ್ಥಿಕ ಮೂಲಗಳಿಲ್ಲದ ಕಾರಣ ಅಲೆಮಾರಿಗಳಾಗಿ ವಿವಿಧ ಪ್ರದೇಶಗಳಿಗೆ ತೆರಳಿ ಭಿನ್ನ ಭಿನ್ನ ವೃತ್ತಿಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡುದರ ಪರಿಣಾಮವಾಗಿ ಅನೇಕ ಉಪಪಂಗಡಗಳು ಉದ್ಭವವಾಗಿರುವುದು ಕಂಡುಬರುತ್ತದೆ.

"The Mysore Tribes and Caste" ಎಂಬ ಪುಸ್ತಕದಲ್ಲಿ ಎಚ್.ವಿ. ನಂಜುಂಡಯ್ಯ ಮತ್ತು ಅನಂತ ಕೃಷ್ಣ ಅಯ್ಯರ್‌ರವರು ಹೆಳವರಲ್ಲಿ ಪ್ರಮುಖವಾಗಿ ಎರಡು ಪಂಗಡಗಳನ್ನು ಗುರುತಿಸಿದ್ದಾರೆ.

೧). ಗಂಟೆ ಹೆಳವರು

೨). ಎತ್ತಿನ ಹೆಳವರು

"The Castes and Tribes of The HEH The Nizames Domininion" ಎಂಬ ಗ್ರಂಥದಲ್ಲಿ ಸೈಯದ್ ಸಿರಾಜ್ ಉಲ್ ಹಸನ್‌ರವರು ಹೆಳವರಲ್ಲಿ ಆರು ಪಂಗಡಗಳನ್ನು ಗುರುತಿಸಿದ್ದಾರೆ.

೧). ಗೊಲ್ಲ    ೨). ತೆಲಗ ಅಥವಾ ಬ್ಬಕ್ಕಾ

೩). ಗಂಟಾ    ೪). ತುರುಕಾ

೫). ಸೊಗರು    ೬). ಮಂಡ

"People of India, Karnataka"ಎಂಬ ಪುಸ್ತಕದಲ್ಲಿ ಆರ್. ಗುಪ್ತರವರು ಹೆಳವರನ್ನು ಮೂರು ಪಂಗಡಗಳಾಗಿ ವಿಭಾಗಿಸಿದ್ದಾರೆ.

೧). ಶಾಂತಿ ಹೆಳವ

೨). ಪಂಗಿ ಹೆಳವ

೩). ಎತ್ತಿನ ಹೆಳವ

"Indian Communites" ಎಂಬ ಪುಸ್ತಕದಲ್ಲಿ ಕೆ.ಎಸ್. ಸಿಂಗ್‌ರವರು ಹೆಳವರ ಪಂಗಡಗಳಲ್ಲಿ ಮೂರು ಪ್ರಕಾರಗಳನ್ನು ಗುರುತಿಸಿದ್ದಾರೆ.

೧). ಗಂಟೆ ಹೆಳವ

೨). ಪಂಗಿ ಹೆಳವ

೩). ಎತ್ತಿನ ಹೆಳವ

'ಹೆಳವರು' ಎಂಬ ಕೃತಿಯಲ್ಲಿ ಬಿ.ಎಂ. ತೆಳಗಡಿಯವರು ಮೂರು ಪಂಗಡಗಳನ್ನು ಗುರುತಿಸಿದ್ದಾರೆ

೧). ಗಂಟೆ ಹೆಳವ

೨). ಚಾಪೆ ಹೆಳವ

೩). ಎತ್ತಿನ ಹೆಳವ

'ಹೆಳವರು' ಎಂಬ ಕೃತಿಯಲ್ಲಿ ನಿಂಗಣ್ಣ ಸಣ್ಣಕ್ಕಿರವರು ಹೆಳವರಲ್ಲಿ ಎರಡು ಪಂಗಡಗಳನ್ನು ಗುರುತಿಸಿದ್ದಾರೆ.

೧). ಗಂಟೆ ಹೆಳವ (ದಕ್ಷಿಣ ಕರ್ನಾಟಕ)

೨). ಎತ್ತಿನ ಹೆಳವ (ಉತ್ತರ ಕರ್ನಾಟಕ)

'ಹೆಳವರು' ಎಂಬ ಪುಸ್ತಕದಲ್ಲಿ ಜೀ.ಶಂ. ಪರಮಶಿವಯ್ಯನವರು ಎರಡು ಪಂಗಡಗಳನ್ನು ಗುರುತಿಸಿದ್ದಾರೆ.

೧). ಗಂಟೆ ಹೆಳವರು

೨). ಚಾಪೆ ಹೆಳವರು[೧೩]

'ಹೆಳವರ ಕಾವ್ಯಗಳು' ಎಂಬ ಕೃತಿಯಲ್ಲಿ ಎಚ್.ಎಲ್. ನಾಗೇಗೌಡರು ಹೆಳವರಲ್ಲಿ ಎರಡು ಪಂಗಡಗಳನ್ನು ಗುರುತಿಸಿದ್ದಾರೆ.

೧). ಗಂಟೆ ಹೆಳವರು (ದಕ್ಷಿಣ ಕರ್ನಾಟಕ)

೨). ಎತ್ತಿನ ಹೆಳವರು (ಉತ್ತರ ಕರ್ನಾಟಕ)[೧೪]

'ಹೆಳವರ ಸಂಸ್ಕೃತಿ' ಎಂಬ ಉಪಸಂಸ್ಕೃತಿ ಮಾಲೆಯಲ್ಲಿ ಹರಿಲಾಲ್ ಪವಾರರವರು ಹೆಳವರಲ್ಲಿ ಮೂರು ಪ್ರಮುಖ ಪಂಗಡಗಳನ್ನು ಮತ್ತು ಹನ್ನೊಂದು ಉಪಪಂಗಡಗಳನ್ನು ಗುರುತಿಸಿದ್ದಾರೆ.

- ಪ್ರಮುಖ ಪಂಗಡಗಳು

೧). ಗಂಟೆ ಹೆಳವರು

೨). ಚಾಪೆ ಹೆಳವರು

೩). ಎತ್ತಿನ ಹೆಳವರು

- ಉಪ ಪಂಗಡಗಳು

೧. ಹಂದಿ ಹೆಳವರು

೨. ದೂದಿ ಹೆಳವರು

೩. ಎತ್ತಿನ ಹೆಳವರು

೪. ಕೂಕಣಿ ಹೆಳವರು

೫. ಮಂದಲ ಹೆಳವರು

೬. ಕಂಬಿ ಹೆಳವರು

೭. ಅಡವಿ ಹೆಳವರು

೮. ಊರ ಹೆಳವರು

೯. ಸಾಧು ಹೆಳವರು

೧೦. ಜಾತಿ ಹೆಳವರು

೧೧. ತಂಬೂರಿ ಹೆಳವರು[೧೮]

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ನಮಗೆ ಸ್ಪಷ್ಟವಾಗಿ ತಿಳಿಯುವುದೆನೆಂದರೆ ಹೆಳವರಲ್ಲಿ ಪ್ರಮುಖವಾಗಿ ಮೂರು ಪಂಗಡಗಳಿದ್ದು ಇವರು ಬೇರೆ, ಬೇರೆ ಪ್ರದೇಶಗಳಿಗೆ ವಲಸೆ ಹೊದಂತೆ ಮತ್ತು ಜೀವನೋಪಾಯಕ್ಕಾಗಿ ಬೇರೆ ಬೇರೆ ವೃತ್ತಿಗಳನ್ನು ಅನುಸರಿಸಿದಂತೆ ಇತರ ಉಪಪಂಗಡಗಳು ಉದ್ಭವವಾಗಿರುವುದು ಕಂಡುಬರತ್ತದೆ. ಉದಾಹರಣೆಗಾಗಿ,

೧) ಚಾಪೆ ಹೆಣೆಯುವವರನ್ನು ಚಾಪೆ ಹೆಳವರು

೨) ದೂದಿ ಮಾರುವವರನ್ನು ದೂದಿ ಹೆಳವರು

೩) ಕೂಕಣಿ ತೆಗೆಯುವವರನ್ನು ಕೂಕಣಿ ಹೆಳವರು ಇತ್ಯಾದಿ.

ಈ ದೇಶದ ಶ್ರೇಣಿಕೃತ ವ್ಯವಸ್ಥೆ ಮತ್ತು ಊಳಿಗಮಾನ್ಯ ಸಮಾಜಗಳ ಪ್ರಭಾವದಿಂದ ಯಾವ ಜಾತಿ ಸಮುದಾಯಗಳು ಮುಕ್ತವಾಗಿಲ್ಲ. ಜಾತಿ ಜಾತಿಗಳ ನಡುವೆ ಅಂತರಗಳಿದ್ದಂತೆ, ಜಾತಿಗಳ ಒಳಗೆ ಇರುವ ಉಪಪಂಗಡಗಳ ನಡುವೆಯೇ ಆಂತರಿಕ ಶ್ರೇಣಿಕರಣ ರೂಪು ಗೊಳ್ಳುತ್ತಲೇ ಬಂದಿದೆ. ಇದಕ್ಕೆ ಕಾರಣ ಒಂದೇ ಜಾತಿಯಲ್ಲಿನ ಜನರ ಗುಂಪುಗಳು ಅನುಸರಿಸುವ ಆರ್ಥಿಕ, ಚಟುವಟಿಕೆಗಳು ಎತ್ತಿನ ಹೆಳವರು ಮತ್ತು ಗಂಟೆ ಹೆಳವರು ಪರಂಪರೆಯ ವೃತ್ತಿಯನ್ನು ಅನುಸರಿಸಿ ತಮ್ಮ ಸಮಾಜದ ಒಳಗೆ ಶ್ರೇಷ್ಠರಾದರೆ, ಸಾಂದರ್ಭಿಕ ಅನಿವಾರ್ಯತೆಗೆ ಚಾಪೆ ಹೆಣೆಯುವ ವೃತ್ತಿಯನ್ನು ಅನುಸರಿಸುವ ಚಾಪೆಹೆಳವರು ತಮ್ಮದೇ ಸಮುದಾಯದಲ್ಲಿ ಕನಿಷ್ಠರಾಗುತ್ತಾರೆ. ಈ ಕಾರಣದಿಂದಾಗಿ ಭಾರತದ ಜಾತಿ ಶ್ರೇಣಿಯಲ್ಲಿ ಶ್ರೇಷ್ಠ ಮತ್ತು ಕನಿಷ್ಠ ಮೌಲ್ಯಮಾಪನವು ಒಂದು ಜಾತಿ ಅಥವಾ ಅದರೊಳಗಿನ ಉಪಪಂಗಡವು ಯಾವ ಬಗೆಯ ವೃತ್ತಿಯನ್ನು ನಿರ್ವಹಿಸುತ್ತದೆ ಎಂಬುವುದನ್ನು ಆಧರಿಸಿರುತ್ತದೆ.

## ಕರ್ನಾಟಕ
## ಹೆಳವ ಪಂಗಡಗಳ ಪ್ರಾದೇಶಿಕ ವಿವಿಧ ಕುಲಕಸುಬುಗಳು




ವೃತ್ತಿ ಸಂಕೇತ ಸೂಚಿ

ಗಂಟೆ ಹೆಳವರು  ಚಾಪೆ ಹೆಳವರು  ಹಂದಿ ಹೆಳವರು

ಕಂಬಿ ಹೆಳವರು  ಎತ್ತಿನ ಹೆಳವರು  ಕೂಕಣೆ ಹೆಳವರು

ತಿತ್ತಿ ಹೆಳವರು  ದೂದಿ ಹೆಳವರು  ಮಂದಲ ಹೆಳವರು

ಯಾವುದೇ ಸಮಾಜದಲ್ಲಿ ಒಬ್ಬ ವ್ಯಕ್ತಿಯ ವೃತ್ತಿ ಮತ್ತು ಆರ್ಥಿಕತೆಯು ಅವನ ಅಂತಸ್ತು ಮತ್ತು ಸ್ಥಾನಮಾನಗಳನ್ನು ನಿರ್ದರಿಸುತ್ತದೆ. ಹೆಳವರು ಇದಕ್ಕೆ ಹೊರತಾಗಿಲ್ಲ. ಆರ್ಥಿಕವಾಗಿ ಸ್ವಲ್ಪ ಉತ್ತಮವಾಗಿರುವ ಮತ್ತು ಇರುವ ಜನಸಂಖ್ಯೆಯಲ್ಲಿಯೇ ಸ್ವಲ್ಪ ಜನ ಹೆಚ್ಚಿಗೆ ವಾಸಿಸು ವಂತಹ ಪ್ರದೇಶಗಳಲ್ಲಿ ಹೆಳವರಿಗೆ ಉತ್ತಮಸ್ಥಾನಮಾನಗಳಿದ್ದರೆ ಕೆಲವು ಊರುಗಳಲ್ಲಿ ಆರ್ಥಿಕವಾಗಿ ಶೋಚನಿಯ ಸ್ಥಿಯಲ್ಲಿರುವ ಮತ್ತು ಸಾಕಷ್ಟು ಕಡಿಮೆ ಸಂಖ್ಯೆಯಲ್ಲಿರುವ ಹೆಳವರು ಸಾಮಾಜಿಕ ವಾಗಿ ಶೋಷಣೆಯನ್ನು ಕಿರುಕುಳವನ್ನು ಅನುಭವಿಸುವುದರ ಜೊತೆಗೆ ನಿರ್ಬಂಧಕ್ಕೂ ಒಳಗಾಗಿದ್ದಾರೆ. ಜೇವರ್ಗಿ ತಾಲೂಕಿನ ಬಳುಂಡಗಿ ಗ್ರಾಮದಲ್ಲಿ ಸುಮಾರು ಮನೆಗಳದ್ದು ಸುಮಾರು ೮೦ ಜನ ವಾಸವಾಗಿದ್ದಾರೆ. ಇವರು ಜೀವನೋಪಾಯಕ್ಕಾಗಿ ಮೇಲ್ವರ್ಗದ ಜನರ ಮನೆಯಲ್ಲಿ ದುಡಿಯುತ್ತಾರೆ. ಆ ಊರಿನಲ್ಲಿ ಇಂದಿಗೂ ಸಹ ಹೆಳವರು ಹೊಸಬಟ್ಟೆ ಧರಿಸುವ ಹಾಗಿಲ್ಲ ಮತ್ತು ಹೊಟೇಲ್‌ನಲ್ಲಿ ಪ್ರವೇಶವಿಲ್ಲ. ಇವರು ಟೀ, ಕುಡಿಯಲೇ ಬೇಕೆಂದರೆ ಅವರಿಗಾಗಿ ಮೀಸಲಾಗಿರುವ ಲೋಟವನ್ನು ತೆಗೆದುಕೊಂಡು ಟೀ, ಹಾಕಿಸಿಕೊಂಡು ಕುಡಿದ ನಂತರ ಆ ಲೋಟವನ್ನು ತೊಳೆದು ಹೋಟೆಲ್ ಒಂದು ಮೂಲೆಯಲ್ಲಿ ಇಟ್ಟುಬರಬೇಕು. ಹೊಟೇಲ್ ಎಂದರೆ ಹಳ್ಳಿಯಲ್ಲಿ ಚಹದ ಅಂಗಡಿ ಎಂದು ಕರೆಯುವ ಒಂದು ಗುಡಿಸಲು ಇದು ಮೇಲ್ವರ್ಗದವರಿಗೆ ಸಂಬಂಧ ಪಟ್ಟದ್ದಾಗಿರುತ್ತದೆ. ಆ ಲೋಟವನ್ನು ಮತ್ತು ಟೀ ಕುಡಿಯಲು ಬಂದ ಹೆಳವನೇ ಮುಟ್ಟಬೇಕು.

ಹೆಳವರು ಅನುಭವಿಸುತ್ತಿರುವ ಸಾಮಾಜಿಕ ಶೋಷಣೆ ಮಾನಸಿಕ ಕಿರುಕುಳಕ್ಕೆ ಇನ್ನೊಂದು ಉದಾಹರಣೆ ಎಂದರೆ ಬಸವನ ಬಾಗೇವಾಡಿ ತಾಲೂಕಿನಲ್ಲಿರುವ ಸಿಂದಗೇರಿ ಗ್ರಾಮ ಇಲ್ಲಿ ೧೦ ಮನೆಗಳದ್ದು ಸುಮಾರು ೫೦ ಜನ ನೆಲೆಸಿದ್ದಾರೆ. ಇವರು ವಂಶಪಾರಂಪರಿಕ ವೃತ್ತಿಯನ್ನು ತೊರೆದು ಕೂಲಿಗಾಗಿ ಬಾಂಬೆ, ಪುನಾ, ಎಂದು ಹೋಗುತ್ತಾರೆ. ಈ ಊರಿನಲ್ಲಿ ಯಾವುದೇ ಜಾತ್ರೆ ನಡೆದಾಗೂ ಊರಿನ ಜನರಿಗೆ ಊಟ ಹಾಕುವ ಪದ್ಧತಿ ಇದೆ. ಇಂತಹ ಸಮಾರಂಭಗಳಿಗೆ ಹೆಳವರು ಹೋಗಬೇಕಾದರೆ ತಟ್ಟೆಯನ್ನು ತೆಗೆದುಕೊಂಡು ಹೋಗಬೇಕು. ಅಷ್ಟೆ ಅಲ್ಲದೇ ಮೇಲ್ವರ್ಗದವರ ಊಟವಾದ ನಂತರವೇ ಇವರು ಕುಳಿತುಕೊಳ್ಳಬೇಕು. ಮೇಲ್ವರ್ಗದವರ ಮದುವೆ ಸಮಾರಂಭಗಳಿಗೆ ಹೆಳವರನ್ನು ಊಟಕ್ಕೆ ಕರೆದರೆ ತಟ್ಟೆಯನ್ನು ತೆಗೆದುಕೊಂಡು ಹೋಗಲೇಬೇಕಿತ್ತು ಮತ್ತು ಮೇಲ್ವರ್ಗದವರ ನಂತರ ಊಟಮಾಡಬೇಕಾಗಿತ್ತು. ಆದರೆ ಇಂದು ಆಧುನಿಕತೆಯ ಗಾಳಿ ಈ ಗ್ರಾಮದಲ್ಲಿ ಬಿಸಿರುವುದರಿಂದ ಮದುವೆ, ಸಮಾರಂಭ, ಜಾತ್ರೆಗಳಲ್ಲಿ ಊಟಕ್ಕೆ ತಟ್ಟೆ ಉಪಯೋಗಿಸುವ ಬದಲು ಊಟದ ಎಲೆ ಅಥವಾ ಪ್ಲಾಸ್ಟಿಕ್ ತಟ್ಟೆಗಳನ್ನು ಬಳಸುತ್ತಿರುವುದರಿಂದ ಮನೆಯಿಂದ ತಟ್ಟೆ ತೆಗೆದುಕೊಂಡು ಹೋಗುವ ಕಷ್ಟ ಹೆಳವರಿಗೆ ತಪ್ಪಿದೆ ಆದರೆ ಊಟ ಮಾತ್ರ ಕೊನೆಯಲ್ಲೇ ಮಾಡಬೇಕು.

ಇಂತಹ ಅನಿಷ್ಟ ಪದ್ಧತಿಗಳನ್ನು ಸಾಕಷ್ಟು ಗ್ರಾಮಗಳಲ್ಲಿ ಹೆಳವರು ಅನುಭವಿಸುತ್ತಿದ್ದಾಗ್ಯೂ

ಅದನ್ನು ಮೌನವಾಗಿ ಸಹಿಸಿಕೊಂಡು ಬಂದಿದ್ದಾರೆ. ಕಾರಣ ಇವರು ಸಂಖ್ಯೆಯಲ್ಲಿ ತುಂಬಾ ಕಡಿಮೆ ಇರುವುದು ಅಲ್ಲದೆ ಇವರು ಜೀವನೋಪಾಯಕ್ಕಾಗಿ ಮೇಲ್ವರ್ಗದವರನ್ನೆ ಅವಲಂಬಿಸಿರುವುದು ಜೊತೆಗೆ ಹೆಳವರು ತುಂಬಾ ಸೌಮ್ಯ ಸ್ವಭಾವದವರಾಗಿರುವುದರಿಂದ ಇಂತಹ ಶೋಷಣೆ, ಕಿರುಕುಳ, ದೌರ್ಜನ್ಯಗಳನ್ನು ಅನುಭವಿಸುತ್ತಲೆ ಬಂದಿದ್ದಾರೆ. ಇವರು ಆರ್ಥಿಕವಾಗಿ ಮತ್ತು ಸಂಖ್ಯೆ ದೃಷ್ಟಿಯಿಂದ ಎಲ್ಲಿ ಉತ್ತಮವಾಗಿದ್ದಾರೊ ಅಂತಹ ಪ್ರದೇಶಗಳಲ್ಲಿ ಒಳ್ಳೆ ಗೌರವ ಉತ್ತಮ ಸ್ಥಾನಮಾನವಿದೆ. ಯಾವ ಪ್ರದೇಶಗಳಲ್ಲಿ ಕಡಿಮೆ ಸಂಖ್ಯೆಯಿಂದ ಕೂಡಿದ್ದು ಆರ್ಥಿಕವಾಗಿ ಹಿಂದುಳಿದ್ದಾರೋ ಅವರು ಮಾತ್ರ ಕೆಳಗಿನ ಸ್ಥಿತಿಯಲ್ಲಿದ್ದಾರೆ. ಇಂತಹ ಅಂಶಗಳನ್ನು ಗಮನಿಸಿದಾಗ ನಾವು ಒಂದು ಸ್ಪಷ್ಟ ನಿರ್ಧಾರಕ್ಕೆ ಬರಬಹುದು. ಸಮಾಜದಲ್ಲಿ ಯಾರು ಆರ್ಥಿಕವಾಗಿ ಹಿಂದುಳಿದಿರುತ್ತಾರೊ ಯಾರು ಅನುತ್ಪಾದಕ ವೃತ್ತಿಯಲ್ಲಿ ತೊಡಗಿರುತ್ತಾರೋ, ಅಂತಹವರು ಎಂದಿಗೂ ಸಮಾಜದಲ್ಲಿ ಉನ್ನತ ಗೌರವ ಸ್ಥಾನಮಾನಗಳನ್ನು ನಿರೀಕ್ಷಿಸಲು ಸಾಧ್ಯವಿಲ್ಲ ಎಂಬುದು ಇದು ವಾಸ್ತವವೂ ಕೂಡ.

**ಹೆಳವ ಸಮುದಾಯದ ಆರ್ಥಿಕ ಚಟುವಟಿಕೆಗಳು**

ಬಡತನ ಹಸಿವು ಅವಮಾನಗಳು ಮನುಷ್ಯನ ಆತ್ಮವಿಶ್ವಾಸ,ಆಂತರಿಕಶಕ್ತಿ, ಉತ್ಸಾಹಗಳನ್ನು ಅಡಗಿಸಿ ನಿಶಕ್ತರನ್ನಾಗಿಸಿ ನೇರವಾಗಿ ದಾಸ್ಯತ್ವಕ್ಕೆ ನೂಕುತ್ತದೆ. ನಮ್ಮ ದೇಶದಲ್ಲಿರುವ ಅಲೆಮಾರಿಗಳು ಸಾಮಾಜಿಕ, ಆರ್ಥಿಕ ಅಧಿಕಾರಗಳಿಂದ ವಂಚಿತರಾಗಿ ಕಷ್ಟಗಳನ್ನು, ನೋವುಗಳನ್ನು, ಅವಮಾನಗಳನ್ನು ಅನುಭವಿಸುತ್ತಾ ಜೀವನವನ್ನು ನಿರ್ವಹಿಸಿಕೊಂಡು ಬಂದವರಾಗಿದ್ದಾರೆ. ಜಾತಿವ್ಯವಸ್ಥೆಯೆಂಬುವುದು ಅತ್ಯಂತ ಕ್ರೂರವಾದ ಅನಿಷ್ಟ ಪದ್ಧತಿಯಾಗಿದ್ದು ಕೆಲವು ಸ್ವ ಹಿತಾಸಕ್ತಿ ಗುಂಪಿನವರು ಅಲೆಮಾರಿಗಳಿಗೆ ಜಾತಿವ್ಯವಸ್ಥೆಯಲ್ಲಿ ಅತ್ಯಂತ ಕೆಳಮಟ್ಟದ ಸ್ಥಾನನೀಡಿ ಸೌಲಭ್ಯಗಳಿಂದ ವಂಚಿಸುತ್ತಾ ತಮ್ಮನ್ನು ಆಧರಿಸಿಯೇ ಅಲೆಮಾರಿಗಳು ಬದುಕಬೇಕಾದ ದಯನೀಯ ಸ್ಥಿತಿ ನಿರ್ಮಿಸಿದ್ದಾರೆ. ಈ ವ್ಯವಸ್ಥೆಯನ್ನು ಪ್ರತಿಭಟಿಸುವ ಸ್ಥಿತಿಯಲ್ಲಿಲ್ಲದ ಅಲೆಮಾರಿಗಳು ತಮ್ಮ ಹಣೆಬರಹವನ್ನೆ ಜಪಿಸುತ್ತಾ ಮೌನವಾಗಿ ಸಹಿಸಿಕೊಂಡಿದ್ದಾರೆ. ಇಂತಹ ಪರಿಸ್ಥಿತಿಯು ಆಳುವ ಜನರಿಗೆ ವರದಾನವಾಗಿ ಪರಿಣಮಿಸಿದೆ.

ಸ್ತರವಿನ್ಯಾಸವಿಲ್ಲದ ಸಮಾಜವನ್ನು ಕಾಣಲು ಸಾಧ್ಯವಿಲ್ಲವೆಂದು ಸಾರೋಕಿನ್‌ರವರು ಹೇಳಿದ್ದರೂ ಕೂಡ ಇತರ ರಾಷ್ಟ್ರಗಳಿಗಿಂತ ಭಾರತದಲ್ಲಿ ಜಾತಿಯಾಧಾರಿತವಾಗಿ ಅತಿಯಾದ ಸ್ತರವಿನ್ಯಾಸವಿರುವುದು ಕಂಡುಬರುತ್ತದೆ. ಕೆಲವು ಸಮುದಾಯಗಳು ಮಾತ್ರ ಲಾಭದಾಯಕ ವೃತ್ತಿಗಳನ್ನು ಮತ್ತು ಗೌರವ ಪ್ರಧಾನ ವೃತ್ತಿಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡು ಬಹುಕಾಲದಿಂದ ವೈಭವಯುತ ಜೀವನವನ್ನು ಸಾಗಿಸುತ್ತಾ ಇತರ ಸಮುದಾಯಗಳನ್ನು ಕೀಳಾಗಿ ಕಾಣುತ್ತಾ ತಮ್ಮ ಸ್ವಾರ್ಥಕ್ಕಾಗಿ ಅವರನ್ನು ಬಳಸಿಕೊಳ್ಳುತ್ತಾ ತಮ್ಮ ಅಡಿಯಾಳನ್ನಾಗಿಸಿಕೊಂಡೆ ಬಂದಿದ್ದಾರೆ.

ಅಲೆಮಾರಿಗಳು ಸಾಮಾಜಿಕವಾಗಿ ಅಭಿವೃದ್ಧಿಯಾಗದಿರುವುದಕ್ಕೆ ಪ್ರಮುಖ ಕಾರಣ ಇವರು

ಆರ್ಥಿಕವಾಗಿ ಬೇರೆಯವರನ್ನು ಅವಲಂಬಿಸಿದ್ದು. ಬೇರೆಯವರನ್ನೇ ಅವಲಂಬಿಸಿದ್ದ ಅಲೆಮಾರಿಗಳು ಸಾಮಾಜಿಕವಾಗಿ ಬಹಳ ಹೀನವಾದ ಪರಿಸ್ಥಿತಿಯಲ್ಲೆ ಜೀವನ ಸಾಗಿಸುತ್ತಾ ಬಂದವರಾಗಿದ್ದಾರೆ. ಒಂದು ಸಮುದಾಯದ ಸಂಪೂರ್ಣ ಅಭಿರುದ್ಧಿಯು ಆ ಸಮುದಾಯ ಯಾವ ರೀತಿಯ ಉತ್ಪಾದನೆಯಲ್ಲಿ ತೊಡಗಿದೆ ಎಂಬುವುದರ ಮೇಲೆ ನಿರ್ಧಾರವಾಗುತ್ತದೆ. ಆದರೆ ಅಲೆಮಾರಿಗಳು ಬೇರೆಯವರನ್ನು ಅವಲಂಬಿಸಿ ಬದುಕಬೇಕಾದ ಪರಿಸ್ಥಿತಿ ಇದ್ದುದರಿಂದ ಸಾಮಾಜಿಕವಾಗಿ ಅಂತಹ ಹೇಳಿಕೊಳ್ಳುವ ಬದಲಾವಣೆಗಳು ನಡೆಯಲಿಲ್ಲ. ಇಂತಹ ಅವಮಾನಕರ ಪರಿಸ್ಥಿತಿಯ ಜೀವನವನ್ನು ಸಾಗಿಸಿಕೊಂಡು ಬಂದವರಲ್ಲಿ ಹೆಳವರು ಒಬ್ಬರಾಗಿದ್ದಾರೆ.

ಹೆಳವರು ಮೂಲತಃ ಆಂಧ್ರ ಪ್ರದೇಶದಿಂದ ವಲಸೆ ಬಂದವರಾಗಿದ್ದು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಚದುರಿಹೋಗಿ ನೆಲೆಸಿದ್ದಾರೆ. ಹೆಳವರ ಪ್ರಮುಖ ವೃತ್ತಿ ವಂಶಾವಳಿ ಹೇಳುವದಾಗಿದ್ದರೂ ಸಹ ಪರಿಸ್ಥಿತಿ ಸಂದರ್ಭಕ್ಕನುಗುಣವಾಗಿ ಇತರ ವೃತ್ತಿಗಳಲ್ಲಿ ತೊಡಗಿ ಜೀವನ ಸಾಗಿಸುತ್ತಾ ಬಂದಿರುವುದು ಕಂಡುಬರುತ್ತದೆ.

**ಹೆಳವ ಸಮುದಾಯದ ಆರ್ಥಿಕ ಚಟುವಟಿಕೆಗಳು**

**೧. ವಂಶಾವಳಿ ಹೇಳುವುದು**

ಹೆಳವರು ತಮ್ಮದೇ ಆದ ಕೆಲವು ಒಕ್ಕಲು ಮನೆಗಳನ್ನು ಹೊಂದಿದ್ದು ವರ್ಷಕ್ಕೆ ಒಂದು ಬಾರಿ ಅಥವಾ ಎರಡು ಬಾರಿ ಅಲ್ಲಿಗೆ ಹೋಗಿ ಅವರ ಮನೆಯ ಜನನ, ಮರಣ ಮುಂತಾದವುಗಳನ್ನು ದಾಖಲಿಸಿಕೊಂಡು ಅವರು ಕೊಟ್ಟ ದವಸ, ಧಾನ್ಯಗಳನ್ನು ಪಡೆಯುತ್ತಾರೆ. ಕೆಲವು ಸಂದರ್ಭ ಇವರು ಹೋದಾಗ ಆ ಮನೆಯಲ್ಲಿ ಮದುವೆಯಂತಹ ಯಾವುದಾದರೂ ಶುಭಕಾರ್ಯ ಆಗಿದ್ದರೆ ಅವರನ್ನು ಕಾಡಿ, ಬೇಡಿ, ಕುರಿ, ಕೋಳಿ, ಹಸು ಹಳೆಬಟ್ಟೆ ಅಥವಾ ಪಾತ್ರೆಗಳನ್ನು ಪಡೆಯುತ್ತಾರೆ.

**೨. ಚಾಪೆ ಹೆಣೆಯುವುದು**

ಈ ವೃತ್ತಿ ಮಾಡುವವರನ್ನು ಚಾಪೆ ಹೆಳವರೆಂದು ಕರೆಯುತ್ತಾರೆ. ಇವರು ಮೊದಲು ಒಕ್ಕಲು ಮನೆಗಳಗೆ ಹೋಗುತ್ತಿದ್ದರು. ಆದರೆ ಅವರು ಕೊಡುವ ದವಸ, ಧಾನ್ಯದಿಂದ ಹೊಟ್ಟೆ ಹೊರೆಯುವುದು ಕಷ್ಟವಾದಾಗ ಅನಿವಾರ್ಯವಾಗಿ ಸ್ಥಳಯವಾಗಿ ಸಿಗುವ ಈಚಲು ಗರಿಗಳಿಂದ ಚಾಪೆ ಹೆಣೆದು ಮಾರತೊಡಗಿದರು.

**೩. ದೂದಿ ಮಾರುವುದು**

ಹೆಳವರಲ್ಲಿ ಕೆಲವರು ನೀರಿನಲ್ಲಿ ಬೆಳೆದಿರುವ ಆಪದ ತೆನೆಯನ್ನು ತಂದು ಅದನ್ನು ಒಣಗಿಸಿ ನಂತರ ಸುಟ್ಟು ಅದರಿಂದ ದೂದಿ(ಅಳ್ಳ)ಯನ್ನು ತಯಾರಿಸಿ ಸಂತೆಗಳಲ್ಲಿ ಮಾರುತ್ತಾರೆ. ಚಿಲುಮೆ ಸೇದುವವರು ಬೆಂಕಿಹೊತ್ತಿಸಲು ಈ ದೂದಿಯನ್ನೇ ಹೆಚ್ಚಾಗಿ ಬಳಸುತ್ತಾರೆ.

೪. ಹಂದಿ ಸಾಕುವುದು

ಹೆಳವರ ಆರ್ಥಿಕ ಚಟುವಟಿಕೆಗಳಲ್ಲಿ ಹಂದಿ ಸಾಕುವುದು ಕೂಡ ಒಂದು ವೃತ್ತಿಯಾಗಿದೆ. ಹಂದಿಯ ಗೊಬ್ಬರವನ್ನು ರೈತರಿಗೆ ಮಾರುತ್ತಾರೆ. ಅಲ್ಲದೆ ಇವರ ಹೆಣ್ಣುಮಕ್ಕಳು ಹಂದಿಯ ಕೊಬ್ಬನ್ನು ಸಂತೆ ಪೇಟೆಗಳಿಗೆ ತೆಗೆದುಕೊಂಡು ಹೋಗಿ ಮಾರುತ್ತಾರೆ. ಕೆಲವು ಚಿಕ್ಕಮಕ್ಕಳು ಮತ್ತು ಮಹಿಳೆಯರು ಬಡತನದ ಬೇಗೆಯನ್ನು ತಾಳಲಾರದೇ ಭಿಕ್ಷೆಯನ್ನು ಸಹ ಬೇಡುತ್ತಾರೆ.

೫. ಕೂಕಣಿ ತೆಗೆಯುವುದು

ಹೆಳವರಲ್ಲಿ ಕೆಲವು ಜನ ಕೂಕಣಿ ತೆಗೆಯುವಲ್ಲಿ ತುಂಬಾ ಪ್ರಾವಿಣ್ಯತೆಯನ್ನು ಹೊಂದಿದ್ದಾರೆ. ಕಿವಿಯಲ್ಲಿರುವ ಕೂಕಣಿಯನ್ನು ನಾಜೂಕಿನಿಂದ ತೆಗೆಯುತ್ತಾರೆ. ಅಲ್ಲದೆ ಕಣ್ಣಿನಲ್ಲಿ ಧೂಳು, ಚಿಕ್ಕಕಲ್ಲಿನ ಹರಳುಗಳು ಬಿದ್ದಿದ್ದರು ತೆಗೆಯುತ್ತಾರೆ. ಪ್ರತಿಫಲವಾಗಿ ಹಣ, ದವಸ, ಧಾನ್ಯ ಪಡೆಯುತ್ತಾರೆ. ಜೊತೆಗೆ ಚಾಪೆ, ಕಸಬರಿಗೆಯನ್ನು ಸಹ ಮಾರಿ ಜೀವನ ನಿರ್ವಹಿಸುತ್ತಾರೆ.

೬. ಮದ್ದು ನೀಡುವುದು

ಹೆಳವರಲ್ಲಿಯ ಒಂದು ಪಂಗಡದವರನ್ನು 'ಮಂದಲ ಹೆಳವ'ರೆಂದು ಕರೆಯುತ್ತಾರೆ. ಇವರು ಬಾಣಂತಿಯರಿಗೆ, ಚೇಳು ಕಚ್ಚಿದವರಿಗೆ, ಹಾವು ಕಚ್ಚಿದವರಿಗೆ, ಜ್ವರ, ಕೆಮ್ಮು ಬಂದವರಿಗೆ ನಾಟಿ ಔಷಧ(ಮಂದಲ) ನೀಡುತ್ತಾರೆ.

೭. ಕೃಷಿ

ಹೆಳವರು ಜಮೀನ್ದಾರರಲ್ಲದಿದ್ದರೂ ಕೂಡ ಅಲ್ಪಸ್ವಲ್ಪ ಭೂಮಿಯನ್ನು ಹೊಂದಿದ್ದಾರೆ. ಹೆಳವರಲ್ಲಿ ಕೆಲವರು ಕೃಷಿಯನ್ನೇ ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಅದರಲ್ಲಿ ಕೆಲವರು ಕೃಷಿ ಜೊತೆಗೆ ವಂಶಾವಳಿ ವೃತ್ತಿಯನ್ನು ಕೂಡ ಮಾಡುತ್ತಿದ್ದಾರೆ.

೮. ಇತರೆ ಆರ್ಥಿಕ ಚಟುವಟಿಕೆಗಳು

ಹೆಳವರು ಬಹುತೇಕವಾಗಿ ಕೃಷಿಕರನ್ನೆ ಅವಲಂಬಿಸಿ ಬದುಕುವರಾಗಿದ್ದರೂ, ಅವರಲ್ಲಿ ಕೆಲವರು ಆಧುನೀಕ ಗಾಳಿಯ ಸೋಂಕಿನಿಂದಾಗಿ ಚಿಕ್ಕವ್ಯಾಪಾರಿಗಳಾಗಿ, ದಿನಗೂಲಿಗಳಾಗಿ, ಪ್ಯಾಕ್ಟರಿ ಕಾರ್ಮಿಕರಾಗಿ ಎಲ್.ಐ.ಸಿ. ಏಜೆಂಟರಾಗಿ ಕೂಲಿ, ಕಾರ್ಮಿಕರಾಗಿ, ಹಮಾಲರಾಗಿ ಅದರಲ್ಲಿ ಬೆರಳೆಣಿಕೆಯಷ್ಟು ಜನ ಸರಕಾರಿ ಮತ್ತು ಖಾಸಗಿ ನೌಕರರಾಗಿ ಕಾರ್ಯನಿರ್ವಹಿಸು ತ್ತಿರುವುದು ಕಂಡುಬರುತ್ತದೆ.

ಹೆಳವರು ಆರ್ಥಿಕ ಚಟುವಟಿಕೆಯ ಮೂಲಗಳಾಗಿ ಈ ಮೇಲಿನ ವೃತ್ತಿಗಳನ್ನು ಅನುಸರಿ ಸುತ್ತಿದ್ದರೂ ಅವರು ಹಗಲು, ರಾತ್ರಿ ಎನ್ನದೇ ದುಡಿದರೂ ಇಡೀ ಕುಟುಂಬಕ್ಕೆ ಎರಡು ಹೊತ್ತಿನ ಊಟ ದೊರಕಿಸುವುದು ಕಷ್ಟವಾಗಿದೆ. ಮೂಲಭೂತ ಸೌಕರ್ಯಗಳಿಂದಲೂ ವಂಚಿತರಾಗಿ ದುರ್ಗಮ ಜೀವನ ನಡೆಸುತ್ತಿದ್ದಾರೆ. ಇದಕ್ಕೆ ಕಾರಣ ಇವರಿಗೆ ನಿಶ್ಚಿತ ಆರ್ಥಿಕ ಮೂಲಗಳಿಲ್ಲ ದಿರುವುದು. ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಬಿತ ಆರ್ಥಿಕ

ಮೂಲಗಳನ್ನು ನೆಚ್ಚಿಕೊಂಡಿರುತ್ತದೆಯೋ ಆ ಸಮುದಾಯವು ಎಂದಿಗೂ ಮುಂದುವರೆಯದು. ಹೀಗಾಗಿ ಸಮುದಾಯವೊಂದಕ್ಕೆ ಸಾಂಸ್ಕೃತಿಕವಾಗಿ ಶತಮಾನಗಳ ಇತಿಹಾಸವಿದ್ದರೂ, ವರ್ತಮಾನವನ್ನು ಎದುರಿಸುವ ಆಧುನಿಕ ಕೌಶಲ್ಯಗಳಿಲ್ಲದೆ ಹೋದರೆ ಅಂತಹ ಸಮುದಾಯಗಳು ಇಂದಿನ ಜಾಗತಿಕ, ತಾಂತ್ರಿಕ ಯುಗದಲ್ಲಿ ಮೂಲೇ ಗುಂಪಾಗುವುದು ಅನಿವಾರ್ಯವಾಗುತ್ತದೆ. ಇನ್ನೂ ಮುಂದಾದರೂ ಈ ಸಮುದಾಯವನ್ನು ವ್ಯವಸ್ಥಿತವಾಗಿ ಮುನ್ನಡೆಸಬೇಕಾಗಿದೆ.

**ಅಡಿಟಿಪ್ಪಣಿ**

1. Rev.F. Kittel Kannada English Dictionary 1982. P. 1693
೨. ಡಾ. ಚಂದ್ರಶೇಖರ ಕಂಬಾರ (ಸಂ), ಕನ್ನಡ ಜಾನಪದ ವಿಶ್ವಕೋಶ, ೧೯೮೫ ಸಂಪುಟ-೧ ಪು. ೪೨೨. ಅದೇ ಸಂಪುಟ-೨, ಪು. ೧೧೮೫.
೩. Govt of Karnatka Report of the second backward classes commission Vol.III Banglore 1986 P. 38.
೪. ಎಚ್.ಎಲ್. ನಾಗೇಗೌಡ ಹೆಳವರು ಮತ್ತು ಅವರ ಕಾವ್ಯಗಳು ೧೯೮೨ ಪ್ರಸ್ತಾವನೆ.
೫. "ಪ್ರೊ. ಬಿ.ಎಂ. ತೆಳಗಡಿ "ಹೆಳವರು" ಜಾನಪದ ಸಾಹಿತ್ಯಾ ದರ್ಶನ ಭಾಗ-೬, ೧೯೮೦ ಪು. ೧೨೯.
೬. ಡಾ. ಜಿ.ಶಂ. ಪರಮಶಿವಯ್ಯ, ಹೆಳವರ ಕಾವ್ಯಗಳು, ೧೯೭೪, ಪ್ರಸ್ತಾವನೆ ಪು. ೧
೭. ಪ್ರೊ. ಬಿ.ಬಿ. ಮಹೀಶವಾಡಿ, "ಹೆಳವರ ಹಾಡುಗಳು" ಜಾನಪದ ಸಾಹಿತ್ಯ ದರ್ಶನ, ಭಾಗ-೪, ೧೯೭೮, ಪು. ೧೯೩
೮. ಸಂಪಾದಕರು ಗೊ.ರು.ಚನ್ನಬಸಪ್ಪ ಕರ್ನಾಟಕ ಜನಪದ ಕಲೆಗಳು, ೧೯೭೭. ಪು. ೧೯೨-೧೯೩
೯. ಶಂ.ಬಾ. ಜೋಶಿ, ಎಡೆಗಳು ಹೇಳುವ ಕಂನಾಡ ಕತೆ, ೧೯೪೭. ಪು. ೨೧೪-೩೦
೧೦. ಮಲ್ಲಿಕಾರ್ಜುನ ಹುಲಗಣ್ಣನವರ ಜನಪದ ಸಾಹಿತ್ಯದಲ್ಲಿ ಹೆಳವ ಜನಾಂಗದ ಸಾಹಿತ್ಯ ಹಾಗೂ ಪರಂಪರೆ" ಜಾನಪದ ಜಗತ್ತು. ಸಂ-.೨ ಸಂಚಿಕೆ-೬ ಪು. ೮೩.
೧೧. ಎಸ್.ರಾಮಸ್ವಾಮಿ 'ಹೆಳವ ಜನಾಂಗ ಒಂದು ಪರಿಚಯ" 'ಜನಪದ' ಪತ್ರಿಕೆ, ಅಕ್ಟೋಬರ್ ೧೯೮೩, ಪು. ೨೭
೧೨. ಹೆಳವರ ಸಂಸ್ಕೃತಿ : ಹರಿಲಾಲ್ ಪವಾರ ಪು. ೬

೧೩. ಎ.ಎಸ್. ಪ್ರಭಾಕರ್‌ರವರು ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಸಲ್ಲಿಸಿದ 'ಹೆಳವರು' ವರದಿ, ೨೦೦೬, ಪು. ೩೨

೧೪. ಚ.ನ. ಶಂಕರರಾವ್., ಭಾರತಿಯ ಸಮಾಜ ಪರಿಚಯ, ಜೈಭಾರತ ಪ್ರಕಾಶನ, ಮಂಗಳೂರು, ೨೦೦೫, ಪು. ೧೧೪

೧೫. ಎ.ಎಸ್. ಪ್ರಭಾಕರ., ಡಾ.ಟಿ.ಎನ್. ಚಂದ್ರಕಾಂತ., ಡೊಂಬರು: ಒಂದು ಚಾರಿತ್ರಿಕ ಹಿನ್ನೋಟ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬, ಪು. ೧೨೨

೧೬. ಎ.ಎಸ್. ಪ್ರಭಾಕರ್‌ರವರು ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಸಲ್ಲಿಸಿದ 'ಹೆಳವರು' ವರದಿ, ೨೦೦೬, ಪು. ೫೪, ೫೫, ೫೬

೧೭. ಎಚ್.ಎಲ್. ನಾಗೇಗೌಡ ಹೆಳವರು ಮತ್ತು ಅವರ ಕಾವ್ಯಗಳು ೧೯೮೨ ಪ್ರಸ್ತಾವನೆ. XXXIV

೧೮. ಹರಿಲಾಲ್ ಪವಾರ., ಹೆಳವರ ಸಂಸ್ಕೃತಿ, ಪು. ೧೬, ೧೭, ೧೮, ೧೯- ೨೦

ಅಧ್ಯಾಯ - ೩

# ಹೆಳವರ ಪಾರಂಪರಿಕ ವೃತ್ತಿ ಜೀವನ

* ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವ ಹೆಳವರು
* ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಸಾಮಾಜಿಕತೆ
* ಪಾರಂಪತಿಕ ವೃತ್ತಿಯಲ್ಲಿರುವ ಹೆಳವರ ಆರ್ಥಿಕತೆ

# ಹೆಳವರ ಪಾರಂಪರಿಕ ವೃತ್ತಿ ಜೀವನ

ಮಾನವನು ಪ್ರಾರಂಭದಲ್ಲಿ ತುಂಬಾ ಸರಳ ಜೀವಿಯಾಗಿದ್ದನು. ಅವನ ಬೇಡಿಕೆಗಳು ಸಹ ತುಂಬಾ ಕಡಿಮೆ ಇದ್ದುದರಿಂದ ಸ್ವಾವಲಂಬಿಯಾಗಿದ್ದನು. ಸ್ವಲ್ಪ ಕಾಲಾನಂತರ ಮಾನವರ ಸಂಖ್ಯೆ ಹೆಚ್ಚ ತೊಡಗಿತು. ಜೊತೆಗೆ ಅವನ ಬೇಡಿಕೆಗಳು ಸಹ ಅದೇ ಗತಿಯಲ್ಲಿ ಹೆಚ್ಚಾಗ ತೊಡಗಿತು. ಆಗ ಮಾನವ ಶ್ರಮವಿಭಜನೆ ಮೂಲಕ ಕೆಲಸ ನಿರ್ವಹಿಸತೊಡಗಿದನು. ಆಗ ವೃತ್ತಿ ಮೇಲೆ ಯಾವುದೇ ನಿರ್ಬಂಧವಿರಲಿಲ್ಲ. ತಮಗಿಷ್ಟ ಬಂದ ವೃತ್ತಿಯನ್ನು ನಿರ್ವಹಿಸಲು ಅವಕಾಶವಿತ್ತು. ಅಲ್ಲಿ ಯಾವುದೇ ಅಸಮಾನತೆ ಕಂಡು ಬರುತ್ತಿರಲಿಲ್ಲ. ಸ್ವಲ್ಪ ದಿನಗಳು ಕಳೆಯುವದರಲ್ಲಿ, ಮಾನವನಲ್ಲಿ ಸ್ವಾರ್ಥಪರತೆ ಹೆಚ್ಚತೊಡಗಿತು. ಅಲ್ಲದೇ ಆಸ್ತಿ, ಅಂತಸ್ತು, ಅಧಿಕಾರ ಎಂಬುದು ತನಗೆ ಮಾತ್ರ ಸೀಮಿತವಾಗಿರದೆ ತನ್ನ ಮಕ್ಕಳು, ಮೊಮ್ಮಕ್ಕಳಿಗೂ ಅದು ಮುಂದುವರಿಯಬೇಕು ಎಂಬ ದುರಾಸೆ ಮಾನವನಲ್ಲಿ ಮೂಡಿದಂತೆ ವೃತ್ತಿಗಳ ಸ್ವರೂಪಕ್ಕನುಸರಿಸಿ ಜಾತಿ-ಜಾತಿಗಳ ನಡುವೆ ಉಚ್ಚ-ನೀಚವೆಂಬ ಕಲ್ಪನೆ ಮೂಡಿ ವೃತ್ತಿಗಳ ನಡುವೆ ಸಾಮಾಜಿಕ ಕಂದಕ ನಿರ್ಮಾಣವಾಯಿತು.

### ವೃತ್ತಿ ಆಧಾರಿತ ಜಾತಿ ಪದ್ಧತಿಯ ಉಗಮ

ವೃತ್ತಿ ಸಿದ್ಧಾಂತವನ್ನು ಬಲವಾಗಿ ಪ್ರತಿಪಾದನೆ ಮಾಡಿರುವ ನೆಸ್‌ಫಿಲ್ಡ್‌ರವರು "ಕಾರ್ಯವೊಂದೇ ಜಾತಿ ವ್ಯವಸ್ಥೆಯ ಉಗಮಕ್ಕೆ ಕಾರಣವಾಗಿದೆ"[1] ಎಂದು ಪಾದಿಸಿದ್ದಾರೆ. ವೃತ್ತಿಗಳ ಸ್ವರೂಪಕ್ಕನುಸರಿಸಿ ಜಾತಿ-ಜಾತಿಗಳ ನಡುವೆ ಉಚ್ಛ-ನೀಚ ಎಂಬ ವ್ಯತ್ಯಾಸ ತಲೆದೋರಿ ಸಾಮಾಜಿಕ ಅಂತರ ಏರ್ಪಟ್ಟಿತು.

ಜಾತಿ ಪದ್ಧತಿ ಬೆಳೆದದ್ದು ಕಸುಬುಗಳ ಆಧಾರದ ಮೇಲೆ. ಸಮಾಜದ ಬೇಡಿಕೆಗಳು ಹೆಚ್ಚಾಗುತ್ತಾ ಹೆಚ್ಚು, ಹೆಚ್ಚು ಕಸುಬುಗಳ ಅಗತ್ಯ ಕಂಡು ಬಂದು ಜಾತಿಗಳ ಸಂಖ್ಯೆ ಕ್ರಮೇಣ

ಹೆಚ್ಚಾಗುತ್ತಾ ಬಂದಿತು. ಋಗ್ವೇದದಲ್ಲಿ ರಾಜನ ಸೇವಕ, ರಥಕಾರ, ಬಡಗಿ, ಅಕ್ಕಸಾಲಿಗೆ, ಹೀಗೆ ಅನೇಕ ಜಾತಿಗಳ ಹೆಸರು ಕಂಡು ಬರುತ್ತದೆ. ಕ್ರಮೇಣ ನಾಗರೀಕತೆ ಬೆಳೆದಂತೆ ಜನ ಜೀವನ ಹೆಚ್ಚು ಸಂಕೀರ್ಣವಾದಂತೆ ಜಾತಿಗಳ ಸಂಖ್ಯೆ ಹೆಚ್ಚಾಯಿತು. ಕೌಟಿಲ್ಯನ "ಅರ್ಥಶಾಸ್ತ್ರ"ದಲ್ಲಿ ಅನೇಕ ಕಸುಬುಗಳ, ಜಾತಿಗಳ ಹೆಸರು ಬರುತ್ತದೆ. ಪುರುಷ ಸೂಕ್ತದಲ್ಲಿ ಪ್ರಥಮ ಚಾತುರ್ವಣ್ಯ ಧರ್ಮವನ್ನು ನಿರೂಪಿಸಿದಾಗಲೇ ಎಷ್ಟೋ ಬಗೆಯ ಜಾತಿಗಳಿದ್ದವು. "ಹುಟ್ಟಿದಾಗಿನಿಂದ ಯಾವುದೇ ಯಾವುದೇ ಒಂದು ಕಸಬುನ್ನು ಮಾಡುವ ಕುಟುಂಬದ ವೃತ್ತಿಗೆ ಆ ಕಸಬು ಮಾಡುವುದು ಸುಲಭವಾಗುತ್ತಿತ್ತೆ ವಿನಃಹ ಅನ್ಯ ಜಾತಿಯ ಕಸುಬು ಮಾಡುವುದು ಬಹುಶಃ ಸಾಧ್ಯವಾಗುತ್ತಿರಲಿಲ್ಲ. ಅಂದ ಮೇಲೆ ಕಸಬುಗಳನ್ನು ಆಶ್ರಯಿಸಿ ಬೆಳೆದ ಜಾತಿಗಳು ಮೊದಲಿನಿಂದಲೂ ಪರಸ್ಪರ ಪ್ರತ್ಯೇಕವಾಗಿಯೇ ಇದ್ದವು ಎಂದು ಹೇಳಿದರೆ ತಪ್ಪಾಗುವುದಿಲ್ಲ".[3] ಎಂಬುವದಾಗಿಯೂ ವಾದಿಸಲಾಗಿದೆ. ಪ್ರತಿಯೊಂದು ಜಾತಿಯೂ ಕೂಡ ತನ್ನ ಜಾತಿ ಕಸುಬಿಗೆ ಪೂರಕವಾದ ಆಚಾರ-ವ್ಯವಹಾರಗಳನ್ನು ಜೀವನ ಪದ್ಧತಿಗಳನ್ನು ಕಾಲಾನುಕ್ರಮದಲ್ಲಿ ಬೆಳೆಸಿಕೊಂಡಿದ್ದರಿಂದ ಜಾತಿ ಜಾತಿಗಳ ನಡುವೆ ಪ್ರತ್ಯೇಕತಾ ಮನೋಭಾವವು ಮತ್ತಷ್ಟು ಪ್ರಖರವಾಗಿ ಬೆಳೆಯಲು ಕಾರಣವಾಯಿತು.

**"ಉಚ್ಛ ನೀಚ", ಎಂಬ ಜಾತಿಗಳಿಗೂ "ಶ್ರೇಷ್ಠ-ಹೀನ" ಎಂಬ ವೃತ್ತಿಗಳಿಗೂ ಸಂಬಂಧವಿದೆ**

ವೃತ್ತಿಗಳ ಸ್ವರೂಪಕ್ಕನುಸರಿಸಿ ಜಾತಿ-ಜಾತಿಗಳ ನಡುವೆ ಉಚ್ಚ-ನೀಚ ಎಂಬ ವ್ಯತ್ಯಾಸ ತಲೆದೋರಿ ಸಾಮಾಜಿಕ ಅಂತರ (Social Distance) ಏರ್ಪಟ್ಟಿತು. ಅಂದರೆ, ಜಾತಿಗಳಲ್ಲಿ ಕಂಡು ಬರುವ ಮೇಲರಿಮೆ ಮತ್ತು ಕೀಳರಿಮೆಯ ಭಾವನೆಗಳು ಅವು ಅನುಸರಿಸುವ 'ಶ್ರೇಷ್ಠ ಅಥವಾ ಹೀನ' ವೃತ್ತಿಗಳಿಂದಾಗಿಯೇ ನಿರ್ಧಾರವಾಗುತ್ತವೆ ಎಂದು ನೆಸ್‌ಫಿಲ್ಡ್ ವಾದಿಸಿದ್ದಾರೆ. ಇದು ನಿಜವೂ ಹೌದು., ಪೌರೋಹಿತ್ಯ, ಅಧ್ಯಾಪನ, ವ್ಯಾಪಾರ, ಮುಂತಾದವು 'ಶ್ರೇಷ್ಠ' ವೃತ್ತಿಗಳೆನಿಸಿಕೊಂಡಿದ್ದರೆ, ಚಮ್ಮಾರಿಕೆ, ಕಮ್ಮಾರಿಕೆ, ಮಡಿವಾಳತನ, ಬೀದಿಗೂಡಿಸುವುದು. ವಂಶಾವಳಿ ಹೇಳಿಕೆ, ಡೊಂಬರಾಟ, – ಇವೆಲ್ಲವೂ 'ನೀಚ' ಕೆಲಸಗಳೆನಿಸಿಕೊಂಡಿದ್ದವು.

ಕೆಲವೊಂದು ಜಾತಿಗಳಂತೂ ಇಂದಿಗೂ ತಮ್ಮ ಸಾಂಪ್ರದಾಯಿಕ ವೃತ್ತಿಯ ಹೆಸರನ್ನೇ ಹೊಂದಿರುವುದನ್ನು ಕಾಣಬಹುದು. ಉದಾಹರಣೆಗೆ ಕಮ್ಮಾರ, ಚಮ್ಮಾರ, ಮಡಿವಾಳ ಅಕ್ಕಸಾಲಿಗ, ಹಜಾಮ, ಹೆಳವ, ಡೊಂಬ, ಕೊರಗ, ಮುಂತಾದವು. ಜಾತಿ ವ್ಯವಸ್ಥೆಯು ಹೀಗೆ ವೃತ್ತಿ ಆಧಾರಿತವಾಗಿ ಉತ್ಪನ್ನವಾಗಿದೆಯೇ ಹೊರತು ಅದಕ್ಕೂ ಧರ್ಮಕ್ಕೂ ಅಥವಾ ಜನಾಂಗೀಯ ವ್ಯತ್ಯಾಸಗಳಿಗೂ (Racial Difference) ಯಾವುದೇ ಸಂಬಂಧವಿರುವುದಿಲ್ಲ ಎಂದು ನೆಸ್‌ಫೀಲ್ಡ್ ವಾದಿಸಿದ್ದಾರೆ.

**ಜಾತಿಯಲ್ಲಿ ಶ್ರೇಷ್ಠ ಕನಿಷ್ಠ ಕಲ್ಪನೆ ಉಗಮದ ಕುರಿತು ಅಂಬೇಡ್ಕರ್ ವಾದ**

ಯಾವುದೋ ಕಾಲಘಟ್ಟದಲ್ಲಿ ಉತ್ಪಾದನೆಯ ವಿಧಗಳನ್ನು ಆಧರಿಸಿ ಶ್ರೇಷ್ಠ ಮತ್ತು ಕನಿಷ್ಠ ಆರ್ಥಿಕ ರಚನೆಗಳು ರೂಪಗೊಂಡವು. ಶ್ರೇಷ್ಠ ಸ್ಥಾನಮಾನಗಳು ವರ್ಣವ್ಯವಸ್ಥೆಯ ಮೇಲಿನ ಸಮುದಾಯಗಳಿಗೆ ಮಾತ್ರ ದಕ್ಕಿದವು. ಆದರೆ ಕನಿಷ್ಠವೆನ್ನಿಸುವ ಆರ್ಥಿಕ ಚಟುವಟಿಕೆಗಳು ಬಹುಸಂಖ್ಯಾತ ದುಡಿವ ವರ್ಗಗಳ ಮೇಲೆ ಹೇರಲ್ಪಟ್ಟವು. ಅಂಬೇಡ್ಕರ ಈ ಚರ್ಚೆಯನ್ನು ಹೀಗೆ ವಿವರಿಸಿದ್ದಾರೆ. "ಸಾಮಾಜಿಕ ಶ್ರಮವಿಭಜನೆಯ ಕಟ್ಟಳೆಗೆ ಒಳಪಟ್ಟ ಉಳಿದ ವರ್ಗಗಳು ತಾರತಮ್ಯಗಳಿಗೆ ಒಳಗಾದವು ಕೆಲವು ದೊಡ್ಡವಾದವು ಉಳಿದವು ಸಣ್ಣಪುಟ್ಟ ಗುಂಪುಗಳಾದವು. ವೈಶ್ಯ ಮತ್ತು ಶೂದ್ರ ವರ್ಗಗಳು ಮೂಲ ಜೀವ ದ್ರವ್ಯವಾಗಿದ್ದು ಇಂದಿನ ಅಸಂಖ್ಯಾತ ಜಾತಿಗಳಿಗೆ ಆಕರವಾದವು".[೩] ಒಟ್ಟಾರೆ ಸಮಾಜದ ಅಂತಃಸ್ಯತ್ವವಾದ ದುಡಿವ ವರ್ಗಗಳು ಆಳುವ ವರ್ಗದ ಅಟ್ಟಹಾಸಕ್ಕೆ, ಪರಮೋಚ್ಛ ಸಾಮಾಜಿಕ ಅಧಿಕಾರ ದಾಹಕ್ಕೆ ವಿಘಟಿತಗೊಂಡು ಜಾತಿಗಳಾದವು. ಕೇವಲ ಶ್ರಮವಿಭಜನೆಯ ಲೌಕಿಕ ಕಾರಣಕ್ಕೆ ವಿಭಜನೆಗೊಂಡ ಜಾತಿಗಳಿಗೆ ಅಲೌಕಿಕವೆನ್ನಿಸುವ, ಆಧ್ಯಾತ್ಮಿಕ ಸ್ತರದಲ್ಲಿ ಅವುಗಳನ್ನು ನ್ಯಾಯಬದ್ಧಗೊಳಿಸಲಾಯಿತು. ಶಾಸ್ತ್ರಗಳ ಮೂಲಕ, ಸಾಮಾಜಿಕ ಕಾನೂನುಗಳ ಮೂಲಕ ಜಾತಿಗಳು ಸ್ವಯಂಪೂರ್ಣಗೊಂಡವು. ಕೇವಲ ಜಾತಿಯೊಂದು ತನ್ನ ಅಸ್ತಿತ್ವದ ಕಾರಣವನ್ನು ಮುಖ್ಯವಾಗಿಸಿಕೊಂಡು ಈ ದೇಶದ ಪರಂಪರೆಯ ರಚನೆಗಳನ್ನು ವ್ಯಾಪಿಸಿತು. ಈ ಕಾರಣಕ್ಕಾಗಿಯೇ ಜಾತಿಗಳು ತಮ್ಮ ಮಧ್ಯೆ ತೆಳುವಾದ ಬೇಲಿಗಳನ್ನೇ ಹೆಣೆದುಕೊಂಡವು. ದುರಂತವೆಂದರೆ, ಜಾತಿಯೊಂದು ಆಂತರಿಕವಾಗಿ ತನ್ನನ್ನು ತಾನೇ ಶ್ರೇಣಿಕರಣಕ್ಕೊಳಪಡಿಸಿಕೊಂಡಿತು. ಈ ಕಾರಣಕ್ಕಾಗಿ ಜಾತಿ ಒಳಗೆ ಶ್ರೇಷ್ಠ, ಕನಿಷ್ಠ ವೈರುಧ್ಯಗಳು ಬೆಳೆದುನಿಂತವು.

ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುವುದೆನೆಂದರೆ ಹಿಂದೆ ಹೊಟ್ಟೆಪಾಡಿಗಾಗಿ ಜನರು ತಮಗೆ ದೋಚಿದ ವೃತ್ತಿಗಳನ್ನು ಆರಂಭಿಸಿದರು. ಕಾಲಾನಂತರದಲ್ಲಿ ಅವರ ಮಕ್ಕಳು, ಮೊಮ್ಮಕ್ಕಳು ಆ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗತೊಡಗಿದರು. ಕಾಲಾನಂತರದಲ್ಲಿ ಈ ವಂಶಪಾರಂಪರಿಕ ವೃತ್ತಿಗಳೇ ಜಾತಿಗಳಾಗಿ ಮಾರ್ಪಟ್ಟವು. ಆಳುವ ವರ್ಗ ಮತ್ತು ಉತ್ಪಾದಕ ವರ್ಗದ ವೃತ್ತಿಗಳು ಶ್ರೇಷ್ಠವೆನಿಸಿಕೊಂಡರೆ ಉತ್ಪಾದಕ ವರ್ಗವನ್ನು ಅವಲಂಬಿಸಿ ಬದುಕುತ್ತಿದ್ದವರ ವೃತ್ತಿಗಳು ಕನಿಷ್ಠವೆನ್ನಿಸಿಕೊಂಡವು.

ನಾವು ಸಮಾಜದ ಇತಿಹಾಸವನ್ನು ಒಮ್ಮೆ ತಿರುಗಿ ನೋಡಿದರೆ ನಮಗೆ ಗೊತ್ತಾಗುತ್ತದೆ. ಯಾರಿಗೆ ನಿರ್ದಿಷ್ಟ ನೆಲ, ನೆಲೆ, ಇರುವುದಿಲ್ಲವೊ, ಅವರಿಗೆ ಸಂಪತ್ತು ಅಧಿಪತ್ಯ, ಭದ್ರತೆ ಬೆಳವಣಿಗೆ ಸಿಗುವುದಿಲ್ಲ. ನೆಲ ಮತ್ತು ನೆಲೆ ಇಲ್ಲದವರು ಒಂದು ಸಮಾಜದ ಮುಖ್ಯ ಸ್ಥಾನದಲ್ಲಿ

ಸ್ಥಾಪಿತವಾಗಲು ಸಾಧ್ಯವಾಗುವುದಿಲ್ಲ. ಅವರು ಮುಖ್ಯ ಉತ್ಪತ್ತಿಯಲ್ಲಿ ತೊಡಗಲು, ಪಾಲುದಾರ ರಾಗಲು ಆಗುವುದಿಲ್ಲ. ಅಲೆಮಾರಿ ಜನಾಂಗ ಎಂದೂ ಮುಖ್ಯ ಉತ್ಪತ್ತಿಯಲ್ಲಿ ತೊಡಗಿಲ್ಲ. ಬೇರೆಯವರ ಉತ್ಪತ್ತಿಯ ಉಳಿತಾಯಕ್ಕೆ ಕೈಚಾಚಿದ್ದಾರೆ. ಅವರ ಕೆಲಸ ಎಂದೂ ಪ್ರಧಾನ ಅಲ್ಲ ಪೂರಕ ಪ್ರಕ್ರಿಯೆಯಾಗಿದೆ. ಅಲೆಮಾರಿಗಳು ಎರಡು ರೀತಿಯಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ.

"೧) ಧರ್ಮಗುರುಗಳು ತಮ್ಮ ಧರ್ಮಪ್ರಚಾರಕ್ಕಾಗಿ ಕೆಲವು ಜನರನ್ನು ನೇಮಿಸಿಕೊಂಡು ಹಳ್ಳಿಗಳ ಕಡೆಗೆ ವಲಸೆ ಕಳುಹಿಸುತ್ತಿದ್ದರು. ಅವರು ಭಿಕ್ಷೆ ಬೇಡುತ್ತ ಧರ್ಮದ ಬಗ್ಗೆ ಹೇಳುತ್ತ ಅಲೆಯುತ್ತಿದ್ದರು. ತಮ್ಮ ಭಿಕ್ಷೆಯ ಸ್ವಲ್ಪ ಭಾಗವನ್ನು ಮೂಲಮಠಕ್ಕೆ ಕೊಡುತ್ತಿದ್ದರು. ಅಂತಹ ಅಲೆಮಾರಿಗಳು ಇಗಲೂ ನಮ್ಮಲ್ಲಿದ್ದಾರೆ. ಶ್ರೀಶೈಲ ಮಠಕ್ಕೆ ನಡೆದುಕೊಳ್ಳುವ ಹೆಳವರು. ಬುಡ್ಗ ಜಂಗಮರು, ಮುಂತಾದವರು.

೨) ಆಳುವ ಮುಖ್ಯ ಉತ್ಪಾದಕ ವರ್ಗಕ್ಕೆ ಕಲಾ ರಂಜನೆ ಅವಶ್ಯಕವಾದ ಅದನ್ನು ನೀಡಲು ವಿದೂಷಕರು, ಹಗಲು ವೇಷಗಾರರು, ಕಿನ್ನರಿ ಜೋಗಿಗಳು, ಡೊಂಬರು, ಬಳಕೆಯಾದದ್ದು ಕಂಡು ಬರುತ್ತದೆ".[೫]

ಹಿಂದೆ ಇವರು ಬೇರೆ, ಬೇರೆ ಕಾರಣಕ್ಕಾಗಿ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಗೌರವಿಸಲ್ಪಟ್ಟ ವರು. ಆದರೆ ಈಗ ಆ ಇತಿಹಾಸ ಮುಗಿದುಹೋಗಿದೆ. ಇಂದು ಅಲೆಮಾರಿಗಳು ಅತಂತ್ರ ಸ್ಥಿತಿಯಲ್ಲಿದ್ದಾರೆ. ತಮ್ಮ ವಂಶಪಾರಂಪರಿಕ ವೃತ್ತಿಯಿಂದ ಹೊಟ್ಟೆ ಹೊರೆಯುವುದು ಕಷ್ಟಕರವಾಗಿದೆ.

**ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವ ಹೆಳವರು**

ಭಾರತದ ಸಾಮಾಜಿಕ ನಿಯಮಗಳು ಪರಂಪರೆಯ ಹೆಸರಲ್ಲಿ ಬಹುಸಂಖ್ಯಾತ ದುಡಿವ ವರ್ಗಗಳಿಗೆ ಆರ್ಥಿಕ ಸ್ವಾತಂತ್ರ್ಯವನ್ನು ನಿರಾಕರಿಸುತ್ತಲೇ ಬಂದಿದೆ. ದುಡಿವ ವರ್ಗಗಳು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಆಳುವ ವರ್ಗಗಳನ್ನು ಅವಲಂಬಿಸುವ ಅನಿವಾರ್ಯತೆ ಬಹುಕಾಲದಿಂದಲೂ ಜೀವಂತವಾಗಿದೆ.

"ಹೆಳವ ಸಮುದಾಯಗಳಲ್ಲಿ ಸಾಮಾನ್ಯವಾಗಿ ಮೂರು ರೀತಿಯ ಗುಂಪಿನ ಜನರನ್ನು ಕಾಣಬಹುದು.

೧. ಪಾರಂಪರಿಕ ವೃತ್ತಿಯಲ್ಲಿ ಅಪಾರ ನಿಷ್ಠೆ ಹೊಂದಿ, ಅದನ್ನು ಇವತ್ತಿಗೂ ಕೂಡ ಮುಂದುವರೆಸಿಕೊಂಡು ಬಂದಿರುವ ಅಲೆಮಾರಿ ಗುಂಪುಗಳು.

೨. ಪಾರಂಪರಿಕ ವೃತ್ತಿಯಲ್ಲಿ ಗೌರವವಿದ್ದರೂ ಸಹ, ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಿ ಕೊಳ್ಳಲು ಇತರ ವೃತ್ತಿಗಳನ್ನು ಅವಲಂಬಿಸಿರುವವರು.

೩. ಪಾರಂಪರಿಕ ವೃತ್ತಿಯಲ್ಲಿ ಯಾವ ಗೌರವವೂ ಇಲ್ಲದೇ ಬೇರೆ ವೃತ್ತಿಗಳನ್ನು ಹೊಂದಿರುವವರು.

ನಾವು ಹೆಳವ ಸಮುದಾಯದಲ್ಲಿ ಈ ರೀತಿಯ ಗುಂಪಿನ ಜನರನ್ನು ಕಾಣಬಹುದಾದರೂ ಇಲ್ಲಿ ಹೆಳವರ ಪಾರಂಪರಿಕ ವೃತ್ತಿಗಳು ಮತ್ತು ಅದನ್ನು ಅವಲಂಬಿಸಿರುವವರ ಕುರಿತು ಗಮನಿಸೋಣ.

**ಹೆಳವರ ಪಾರಂಪರಿಕ ವೃತ್ತಿಗಳು**

ಹೆಳವರ ಪಾರಂಪರಿಕ ವೃತ್ತಿ ವಂಶಾವಳ ಹೇಳುವುದಾಗಿದೆ. ಹೆಳವರು ತಾವು ಅವಲಂಬಿಸಿರುವ ಮನೆಗೆ ವರ್ಷಕ್ಕೆ ಒಂದು ಬಾರಿ ಅಥವಾ ಎರಡು ಬಾರಿ ಹೋಗಿ ಅವರ ಮನೆಯ ಕುಲ ಕೊಂಡಾಡಿ ಅವರ ಮನೆಯಲ್ಲಿನ ಜನನ, ಮರಣಗಳನ್ನು ದಾಖಲಿಸಿಕೊಂಡು ಬರುತ್ತಾರೆ. ವಂಶಾವಳ ಹೇಳುವುದೇ ಪ್ರಮುಖ ವೃತ್ತಿಯಾಗಿಸಿಕೊಂಡಿರುವ ೨ ಪಂಗಡಗಳಾದ ೧) ಎತ್ತಿನ ಹೆಳವರು, ೨) ಗಂಟೆ ಹೆಳವರು. ಇತರೆ ಪಂಗಡದವರು ಪರಿಸ್ಥಿತಿಗೆ ತಕ್ಕಂತೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದ್ದಾರೆ.

**೧) ಎತ್ತಿನ ಹೆಳವರು**

ಬಣ್ಣ ಬಣ್ಣದ ಅಂಗಿಯನ್ನು ಧರಿಸಿ, ಎತ್ತಿನ ಮೇಲೆ ಕುಳತು, ಒಂದು ಕಾಲನ್ನು ಕಂಬಳಯಲ್ಲಿ ಮರೆ ಮಾಡಿ, ಚಪ್ಪೋಡುವನ್ನು ತೆಗೆದುಕೊಂಡು ನಸುಕಿನಲ್ಲಿ ಬಂದರೆಂದರೆ ತಕ್ಷಣ ಗೊತ್ತಾಗುತ್ತದೆ. ಇವರು ಎತ್ತಿನ ಹೆಳವರೇ ಎಂದು. ಈ ರೀತಿಯ ಹೆಳವರು ಹೆಚ್ಚಾಗಿ ಬೆಳಗಾಂ, ಬಿಜಾಪುರ, ಬಾಗಲಕೋಟ, ಧಾರವಾಡ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ.

**೨) ಗಂಟೆ ಹೆಳವರು**

ಗಂಟೆ ಹೆಳವರು ಎತ್ತಿನ ಮೇಲೆ ಕುಳತುಕೊಂಡು ಒಕ್ಕಲು ಮನೆಗಳಗೆ ಹೋಗದೆ ನಡೆದುಕೊಂಡು ಹೋಗುತ್ತಾರೆ. ಇವರು ವರ್ಷಕ್ಕೆ ಒಂದು ಬಾರಿ ಅಥವಾ ಎರಡು ಬಾರಿ ಒಕ್ಕಲು ಮನೆಗಳಗೆ ಹೋಗಿ ಮನೆ ಸದಸ್ಯರ ವಿವರಗಳನ್ನು ದಾಖಲಿಸಿಕೊಂಡು ಅವರ ವಂಶಾವಳಯನ್ನು ಹೊಗಳುತ್ತಾ ಗಂಟೆಯನ್ನು ಬಾರಿಸುತ್ತಾರೆ. ನಂತರ ಅವರು ಕೊಟ್ಟ ದವಸ ಧಾನ್ಯಗಳನ್ನು ಪಡೆಯುತ್ತಾರೆ.

ಹಲವು ವರ್ಷಗಳ ಹಿಂದೆ ಒಕ್ಕಲು ಮನೆಗಳಗೆ ಹೆಳವ ಬಂದನೆಂದರೆ ಅವನನ್ನು 'ಮನೆಯ ಮಗಳೆಂದು ಭಾವಿಸಿ' ಸೀರೆ, ಕುಪ್ಪಸ ಕೊಟ್ಟು ಸತ್ಕರಿಸುತ್ತಿದ್ದರು. ಅಲ್ಲದೇ ಸಾಕಷ್ಟು ಧವಸ-ದಾನ್ಯಗಳನ್ನು ಕೂಡ ನೀಡುತ್ತಿದ್ದರು. ಕೆಲವು ಬಾರಿ ಇವರು ಹೋಗಿದ್ದ ಮನೆಯಲ್ಲಿ ವಿವಾಹಗಳಂತಹ ಶುಭ ಕಾರ್ಯಗಳು ನಡೆದಿದ್ದರೆ ಹೆಳವರು, ಮನೆಯವರಿಂದ ಹಳೆ ಬಟ್ಟೆ, ಹಳೆ ಪಾತ್ರೆ ಹಾಗೂ ಅಲ್ಪಸ್ವಲ್ಪ ಹಣವನ್ನು ಕಾಡಿಬೇಡಿ ಪಡೆಯುತ್ತಿದ್ದರು. ಕೆಲವರು ಖುಷಿಯಿಂದ ಮನೆಯವರೇ 'ದಾನ' ಮಾಡುತ್ತಿದ್ದರು. ಗಂಟೆ ಹೆಳವರು ಹೆಚ್ಚಾಗಿ ಮಂಡ್ಯ, ಮೈಸೂರು, ಶಿವಮೊಗ್ಗ, ಬೆಂಗಳೂರು ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ.

**ಚಾಪೆ ಹೆಳವರು**

ಚಾಪೆ ಹೆಳವರು ಕೆಲವು ಕಡೆ ವಂಶಾವಳಿ ಹೆಳಲು ಹೋಗುತ್ತರಾದರೂ ಅವರ ಪ್ರಮಾಣ ಕಡಿಮೆ. ಇವರು ಈಚಲು ಗರಿಗಳಿಂದ ಚಾಪೆಗಳನ್ನು ತಯಾರಿಸಿ ಮಾರುತ್ತಾರೆ. ಅಲ್ಲದೇ ಕಸಬರಿಗೆ ಮತ್ತು ಈಚಲ ಬುಟ್ಟಿಗಳನ್ನು ಸಹ ತಯಾರಿಸುತ್ತಾರೆ. ಇವರು ದಿನಪೂರ್ತಿ ದುಡಿದರು ದಿನದ ಗಂಜಿಗಾಗಿ ಪರಿತಪಿಸುತ್ತಾರೆ. ಇಂದಿನ ಪ್ಲಾಸ್ಟಿಕ್ ಯುಗದಲ್ಲಿ ಇವರ ವಸ್ತುಗಳಿಗೆ ಬೇಡಿಕೆ ಇಲ್ಲದಂತಾಗಿದೆ. ಚಾಪೆ ಹೆಳವರು ಗುಲಬರ್ಗಾ ಮತ್ತು ಬೀದರ ಜಿಲ್ಲೆಗಳಲ್ಲಿ ಕಾಣ ಸಿಗುತ್ತಾರೆ.

**ಹಂದಿ ಹೇಳವರು**

ಹೆಸರೇ ಸೂಚಿಸುವಂತೆ ಹಂದಿ ಸಾಕುವುದೇ ಇವರ ಮೂಲ ವೃತ್ತಿ. ಇವರು ಬೀದರ್, ಗುಲ್ಬರ್ಗಾ, ಬಳ್ಳಾರಿ, ತುಮಕೂರ, ಮಂಡ್ಯ, ಕೋಲಾರ್, ಮತ್ತು ಮೈಸೂರು ಜಿಲ್ಲೆಗಳಲ್ಲಿ ಕಾಣ ಸಿಗುತ್ತಾರೆ. ಇವರು ಒಕ್ಕಲು ಮನೆಗಳಿಗೆ ಹೋಗದೆ ಹಂದಿಗಳನ್ನು ಸಾಕಿಕೊಂಡು ಅವುಗಳ ಗೊಬ್ಬರ ಮಾರುತ್ತಾರೆ. ಈ ಗುಂಪಿನ ಹೆಣ್ಣು ಮಕ್ಕಳು ಹಂದಿಯ ಕೊಬ್ಬನ್ನು ಸಂತೆ ಮತ್ತು ಪೇಟೆಗಳಲ್ಲಿ ಮಾರುತ್ತಾರೆ. ಕೆಲವು ಹೆಣ್ಣು ಮಕ್ಕಳು ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡುತ್ತಾರೆ.

**ಮಂದಲ ಹೆಳವರು**

ಮಂದಲ ಎಂದರೆ ಮದ್ದು ಅಥವಾ ಔಷಧಿ ಎಂದರ್ಥ. ಮಂದಲ ಹೆಳವರು ಗಿಡಮೂಲಿಕೆ ಗಳಿಂದ ಔಷಧ ಮಾಡಿ ಬಾಣಂತಿಯರಿಗೆ, ಕೆಮ್ಮು, ಜ್ವರ, ಗಜಕರ್ಣ, ಮುಂತಾದ ರೋಗದವರಿಗೆ ನೀಡುತ್ತಾರೆ. ಇವರು ಹೆಚ್ಚಾಗಿ ಮೈಸೂರು, ಬೆಂಗಳೂರು, ಕೋಲಾರ, ತುಮಕೂರು, ಹಾಸನ, ಚಿತ್ರದುರ್ಗ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ.

**ದೂದಿ ಹೆಳವರು**

ಇವರು ನೀರಿನಲ್ಲಿ ಬೆಳೆದಿರುವ ಆಪದ ತೆನೆಯನ್ನು ತಂದು ದೂದಿ ಮಾಡಿ (ಅಳ್ಳಿ ಅಥವಾ ಹತ್ತಿ) ಸಂತೆಗಳಲ್ಲಿ ಮಾರುತ್ತಾರೆ. ಈ ದೂದಿಯನ್ನು ಚಿಲುಮೆ ಸೇದುವವರು ಅದನ್ನು ಹೊತ್ತಿಸಿಕೊಳ್ಳಲು ಬಳಸುತ್ತಿದ್ದರು. ಆದರೆ ಇಂದು ಚಿಲುಮೆ ಸೇದುವವರ ಪ್ರಮಾಣ ಕಡಿಮೆ. ಅವರೂ ಕೂಡ ಇಂದು ಬೆಂಕಿ ಪಟ್ಟಣ ಬಳಸುತ್ತಿದ್ದರುವುದರಿಂದ ದೂದಿಯನ್ನು ಕೇಳುವವರಿಲ್ಲ. ಹೀಗಾಗಿ ದೂದಿ ಹೆಳವರು ಇಂದು ಚಾಪೆ ಹೆಣೆಯುವರು ಮತ್ತು ಹಂದಿ ಸಾಕುವ ಕಾರ್ಯದಲ್ಲಿ ತೊಡಗಿದ್ದಾರೆ. ಇವರ ಬೀದರ, ಬಸವ ಕಲ್ಯಾಣ, ವಾಡಿ, ನರೋಣ ಮತ್ತಿತರ ಭಾಗಗಳಲ್ಲಿ ಕಾಣಸಿಗುತ್ತಾರೆ.

**ಕಂಬಿ ಹೆಳವರು**

ಇವರು ಕಂಬಿಯನ್ನು ಹೊತ್ತುಕೊಂಡು ಒಕ್ಕಲು ಮನೆಗಳಿಗೆ ಹೋಗುತ್ತಾರೆ. ಇಲ್ಲಿ ಕಂಬಿ ಎಂದರೆ ಒಂದು ಬಿದಿರಿನ ಕೋಲಿಗೆ ಹಿಂದೆ ಮತ್ತು ಮುಂದೆ ತುದಿಯಲ್ಲಿ ಚಾಪೆಯಿಂದ

ತಯಾರಿಸಿದ ಚೀಲಗಳನ್ನು ಕಟ್ಟಿರುತ್ತಾರೆ. ಅಲ್ಲದೆ ಮುಂಭಾಗದಲ್ಲಿ ಒಂದು ಗಂಟೆ ಸಹ ಇರುತ್ತದೆ. ಇವರು ಗಂಟೆಯನ್ನು ನುಡಿಸುತ್ತಾ ಒಕ್ಕಲು ಮನೆಗಳಿಗೆ ಹೋಗಿ ಅವರು ಕೊಟ್ಟ ದವಸ, ದಾನ್ಯಗಳನ್ನು ಕಂಬಿಯಲ್ಲಿ ಹಾಕಿಕೊಂಡು ಬರುತ್ತಾರೆ. ಕಂಬಿ ಹೆಳವರು ಶ್ರೀ ಶೈಲ ಮಲ್ಲಿಕಾರ್ಜುನನ ಮೇಲೆ ಅಪಾರ ಭಕ್ತಿ ಹೊಂದಿರುವುದರಿಂದ ಮದ್ಯ, ಮಾಂಸವನ್ನು ಮುಟ್ಟುವುದಿಲ್ಲ. ಇವರು ರಾಯಚೂರು, ಗುಲಬರ್ಗಾ, ಭಾಗಗಳಲ್ಲಿ ಕಂಡುಬರುತ್ತಾರೆ.

**ಅಡವಿ ಹೆಳವರು**

ಅಡವಿ ಹೆಳವರು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಕಕ್ಕೇರಿಯ ಅಡವಿಗಳಲ್ಲಿ ಅಥವಾ ಬಯಲು ಪ್ರದೇಶಗಳಲ್ಲಿ ಕಾಣಸಿಗುತ್ತಾರೆ. ಇವರು ಊರಿನ ಜನರೊಡನೆ ಬೆರೆಯುವುದಿಲ್ಲ. ಜೀವನೋಪಾಯಕ್ಕಾಗಿ ಅಡವಿಯಲ್ಲಿನ ಪ್ರಾಣಿ, ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಅಲ್ಲದೆ ಈಚಲು ಚಾಪೆಗಳನ್ನು ಸಹ ತಯಾರಿಸಿ ಮಾರುತ್ತಾರೆ.

**ತಿತ್ತಿ ಹೆಳವರು**

ತಿತ್ತಿ ಎಂದರೆ ಚರ್ಮದಿಂದ ಮಾಡಿದ ವಾದ್ಯವಾಗಿದ್ದು ಇದರಲ್ಲಿ ಹವೆಯನ್ನು ಅಥವಾ ಗಾಳಿಯನ್ನು ತುಂಬಿ ನಿಧಾನಕ್ಕೆ ಅದುಮಿದಾಗ ಪುಂಗಿಯ ನಾದದಂತೆ ಶೃತಿ ಹೊರಡುತ್ತದೆ. ಆ ಸ್ವರಕ್ಕೆ ತಮ್ಮ ಕಂಠಶ್ರುತಿಯನ್ನು ಸೇರಿಸಿ ಕಥೆ ಹೆಳುತ್ತಾರೆ. ಇವರು ಒಕ್ಕಲು ಮನೆಗಳಿಗೆ ಹೋಗಿ ಕುಲಕೊಂಡಾಡುವ ಬದಲು ಕಥೆಯನ್ನು ಹಾಡಿನ ರೂಪದಲ್ಲಿ ಹೇಳುತ್ತಾರೆ. ನಂತರ ಅವರಿಂದ ದವಸ, ಧಾನ್ಯ ಪಡೆಯುತ್ತಾರೆ. ಇವರು ಹೆಚ್ಚಾಗಿ ಬಳ್ಳಾರಿ, ರಾಯಚೂರು, ಅನಂತಪುರ, ಗುಂತಕಲ್, ಮತ್ತು ಧಢೇಕಲ್ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

**ಕೂಕಣಿ ಹೆಳವರು**

ಇವರು ಸಂತೆ, ಪೇಟೆಗಳಲ್ಲಿ ಜನರ ಕೂಕಣಿ ತೆಗೆಯುತ್ತಾರೆ. ಅಲ್ಲದೆ ಕಣ್ಣಿನಲ್ಲಿ ಹರಳು ಅಥವಾ ಧೂಳು ಬಿದ್ದರೆ ಅದನ್ನು ತೆಗೆಯುತ್ತಾರೆ. ಪ್ರತಿಫಲವಾಗಿ ಒಂದು ಅಥವಾ ಎರಡು ರೂಪಾಯಿಗಳನ್ನು ಪಡೆಯುತ್ತಾರೆ. ಇವರಲ್ಲಿ ಕೆಲವು ಮಹಿಳೆಯರು ಚಾಪೆ, ಕಸಬರಿಗೆಗಳನ್ನು ಈಚಲು ಗರಿಗಳಿಂದ ತಯಾರಿಸಿ ಮಾರುತ್ತಾರೆ. ಇವರು ರಾಯಚೂರು, ಬಳ್ಳಾರಿ, ಹರಪನಹಳ್ಳಿ ಮತ್ತು ಕೊಟ್ಟೂರು ಭಾಗಗಳಲ್ಲಿ ಕಂಡುಬರುತ್ತಾರೆ.

ಈ ಮೇಲಿನ ಪಾರಂಪರಿಕ ವೃತ್ತಿಗಳನ್ನು ಹೆಳವರಲ್ಲಿ ನೋಡಿದಾಗ ಈ ಯಾವ ವೃತ್ತಿಗಳು ಸಹ ಮುಖ್ಯ ಉತ್ಪಾದನಾ ಕ್ರಿಯೆಗಳಾಗಿರದೇ ಅನುತ್ಪಾದಕ ಆರ್ಥಿಕ ಚಟುವಟಿಕೆಗಳಾಗಿರುವುದು ಕಂಡು ಬರುತ್ತದೆ. ಆದರು ಸಹ ಹೆಳವರು ತಮ್ಮ ಪಾರಂಪರಿಕ ವೃತ್ತಿಗಳ ಮೇಲೆ ತುಂಬಾ ಅಭಿಮಾನ ಹೊಂದಿದವರಾಗಿದ್ದಾರೆ. ನಿಮ್ಮ ವೃತ್ತಿಗಳಿಂದ ಆಧುನಿಕ ಸಮಾಜದಲ್ಲಿ ಅದೂ ಸ್ಪರ್ಧಾತ್ಮಕ ಜಗತ್ತಿನಲ್ಲಿ ಜೀವನ ಸಾಗಿಸುವುದು ಕಷ್ಟವೆಂದು ತಿಳಿಹೇಳಲು ಹೋದರೆ ಅವರು

ಹೇಳುವುದು ಹೀಗೆ " ನಮಗೆ ಈ ವೃತ್ತಿಯನ್ನು ದೇವರು ಕೊಟ್ಟಿದ್ದಾನೆ. ನಮ್ಮ ಮುತ್ತಾತಂದಿರ ಕಾಲದಿಂದಲು ಇದನ್ನೆ ಮಾಡಿಕೊಂಡು ಬಂದಿದ್ದೆವೆ. ಅದನ್ನು ನಾವು ಮುಂದುವರೆಸುತ್ತೇವೆ. ಇದರಲ್ಲಿ ನಾವು ಸುಖವಾಗಿದ್ದೇವೆ ನಮ್ಮಲ್ಲಿನ ದಾಖಲೆಗಳನ್ನು ಕೋರ್ಟುಗಳು ನಂಬಿ ತೀರ್ಪು ಕೊಡುತ್ತವೆ. ನಮ್ಮ ಒಕ್ಕಲು ಮನೆಯವರು ನಮ್ಮನ್ನು ಮನೆ ಮಗಳಂತೆ ನೋಡಿಕೊಳ್ಳುತ್ತಾರೆ." ಇಂತಹ ಮಾತುಗಳು ನಿಜಕ್ಕೂ ಅವರಲ್ಲಿರುವ ಮುಗ್ಧತೆಯನ್ನು ಬಿಂಬಿಸುತ್ತದೆ.

**ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಸಾಮಾಜಿಕತೆ**

ಪ್ರತಿಯೊಬ್ಬ ವ್ಯಕ್ತಿಗೂ ಅವನದೇ ಆದ ಜೀವನವಿದ್ದಂತೆ ಜೀವನದ ದೃಷ್ಟಿಕೋನವೊಂದಿದೆ. ನಮ್ಮ ಜೀವನದಲ್ಲಿ ಯಾವುದಕ್ಕೆ ಹೆಚ್ಚಿನ ಮಹತ್ವ ಕೊಡುತ್ತೇವೆಯೋ ಅವು ಜೀವನದ ಮೌಲ್ಯಗಳು ನಮ್ಮ ಜೀವನವನ್ನು ನಿಯಂತ್ರಿಸುತ್ತವೆ. ಅದೇ ನಮ್ಮ ಜೀವನದ ದೃಷ್ಟಿಕೋನ ಕೆಲವರು ಹಣಕ್ಕೆ, ಕೆಲವರು ಐಸಾರಾಮ ಜೀವನಕ್ಕೆ ಬೆಲೆ ಕೊಡುತ್ತಾರೆ. ಇವರೆಲ್ಲರೂ ಜಾತಿವಾದಿಗಳ ಸಾಲಿಗೆ ಸೇರುತ್ತಾರೆ. ಇನ್ನು ಕೆಲವರು ಸಂಗೀತ, ಸಾಹಿತ್ಯ, ಚಿತ್ರಕಲೆಗಳು ಹುತ್ತೇ ಕೆಲವರು ಕಾಯಕಕ್ಕೆ ಮಹತ್ವ ಕೊಡುತ್ತಾರೆ. ಇವರೆಲ್ಲರಿಗೂ ಕಾಯಕವಾದಿಗಳು ಅಥವಾ ಕಲಾರಾದಕರು ಎಂದು ಗುರುತಿಸುತ್ತೇವೆ.

ಪ್ರಾಚೀನ ಕಾಲದಿಂದಲೂ ಮಾನವ ತನ್ನ ಹೊಟ್ಟೆಪಾಡಿಗಾಗಿ ಅಲೆಮಾರಿಯಾಗಿ ಜೀವಿಸುತ್ತಾ ಹೊಸ, ಹೊಸ ವಿಚಾರಗಳನ್ನು ಅವಿಸ್ಕರಿಸುತ್ತಾ ಸಂಸ್ಕೃತಿಯ ತಳಹದಿಯ ಮೇಲೆ ಬದುಕುತ್ತಾ ಸಮಾಜದ ಸರ್ವತೋಮುಖ ಅಬಿವೃದ್ಧಿಯಾದಂತೆ ತಾನು ಬದಲಾದ. ಆದರೆ ಒಂದು ಗುಂಪು ಮಾತ್ರ ತನ್ನದೆಯಾದ ಸಂಪ್ರದಾಯ, ಕಟ್ಟಳೆಗಳನ್ನು ನಂಬಿಕೊಂಡು ಕೃಷಿಗೆ ಅವಲಂಬಿತವಾಗಿ ತನ್ನ ವೃತ್ತಿಯನ್ನು ಹಾಗೆ ಮುಂದುವರೆಸಿಕೊಂಡುಬಂದಿತು. ಆ ಗುಂಪು ನಂತರ ಸ್ಥಿರ ಬುಡಕಟ್ಟು, ಅರೆಅಲೆಮಾರಿ ಬುಡಕಟ್ಟು, ಅಲೆಮಾರಿಬುಡಕಟ್ಟು ಆಗಿ ಮಾರ್ಪಾಟು ಹೊಂದಿತು.

ಇವುಗಳಲ್ಲಿ ಹೆಳವರದು ಒಂದು ಅರೆಅಲೆಮಾರಿ ಸಮುದಾಯವಾಗಿದೆ. ಇವರು ಅಲೆಮಾರಿ ಬದುಕನ್ನು ಒಡಲಲ್ಲಿ ಕಟ್ಟಿಕೊಂಡು ಊರೂರು ಅಲೆಯುವರು. ಮನೆತನದ ತಲೆಮಾರುಗಳ ವೃತ್ತಾಂತಗಳನ್ನು ಹೆಣೆಯುವರು. ಇಂದು ಈ ಊರಲ್ಲಿದ್ದರೆ ನಾಳೆ ಇನ್ನ್ಯಾವುದೊ ಊರು. ಹೀಗೆ ಊರೂರು ಅಲೆಯುತ್ತಾ ಅಲೆಮಾರಿ ಬದುಕನ್ನೆ ಉಸಿರಾಗಿಸಿಕೊಂಡಿರುವ ಇವರು ಅಪಾರ ಪುರಾವೆಗಳ ಗಣಿ. ನ್ಯಾಯದ ಕಟ್ಟೆ ಏರಿದ ಅದೆಷ್ಟೋ ವ್ಯಾಜ್ಯಗಳಿಗೆ ಈ ಹೆಳವರೆ ಅಂತ್ಯ ಹಾಡಿದ್ದಾರೆ.

ತಮ್ಮ ಸಂಸಾರದೊಂದಿಗೆ ಎತ್ತು, ಕುರಿ, ನಾಯಿ, ಕೋಳಿಗಳ ಸಂಘಜೀವನ ನಡೆಸುವ ಜಾಯಮಾನದವರು. ಹತ್ತಾರು ತಲೆಮಾರಿನ ದಾಖಲೆಗಳನ್ನು ಹೊತ್ತಿರುವ ಹೆಳವರಲ್ಲಿ ಒಂದು ಊರಿನ ಮನೆತನದ ಸಮಗ್ರ ಮಾಹಿತಿಗಳಿರುತ್ತವೆ. ಎಲ್ಲ ಊರು, ಒಬ್ಬರಿಗೆ ಸೇರುವುದಿಲ್ಲ.

ಇವರಲ್ಲಿ ಹಲವು ಗುಂಪುಗಳಿದ್ದು ನಿಗದಿತ ಊರು, ಊರಿನ ಕೇರಿಗಳು ಒಂದೊಂದು ಗುಂಪಿನ ಸುಪರ್ದಿಗೊಳಪಟ್ಟಿರುತ್ತವೆ. ಅಂತೆಯೇ ಪ್ರತಿ ವರ್ಷ ಅವರ ವ್ಯಾಪ್ತಿಗೊಳಪಡುವ ಊರು, ಕೇರಿಗೆ ಬಂದು ಅಲ್ಲಿಯ ಮನೆತನಗಳ ಕುಲಕೊಂಡಾಡುತ್ತಾರೆ. ಪ್ರತಿಯಾಗಿ ಆ ಮನೆತನದವರು ತಮ್ಮ ಮನೆಯಲ್ಲಿರುವ ದವಸ, ಧಾನ್ಯ, ಹಳೆಬಟ್ಟೆ, ಪಾತ್ರೆ, ಕುರಿ, ಕೋಳಿ, ಹಸುಗಳನ್ನು ಧಾನವಾಗಿ ಕೊಡುತ್ತಾರೆ. ಕೆಲವು ಮನೆತನದವರು ಇವರು ಕುಲಕೊಂಡಾಡುವುದನ್ನು ಮೆಚ್ಚಿ, ಬೆಳ್ಳಿ, ಬಂಗಾರ, ದತ್ತಿ ಜಮೀನನ್ನು ಬಳುವಳಿಯಾಗಿ ಕೊಟ್ಟ ಉದಾಹರಣೆಗಳು ಇವೆ. ಇವುಗಳನ್ನೆಲ್ಲಾ ಕಟ್ಟಿಕೊಂಡು ಬದುಕನ್ನು ಊರಿಂದೂರಿಗೆ ಹೊತ್ತೊಯ್ಯಲು ಒಂಟೆತ್ತಿನ ಗಾಡಿಗಳೇ ಹೆಳವರ ಪರಿಸರ ಸ್ನೇಹಿ ವಾಹನಗಳಾಗಿವೆ.

**ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಕುಟುಂಬ ವ್ಯವಸ್ಥೆ**

ಹೆಳವರಲ್ಲಿ ಅವಿಭಕ್ತ ಮತ್ತು ವಿಭಕ್ತ ಕುಟುಂಬ ಪದ್ಧತಿಗಳಿದ್ದು ಪುರುಷ ಪ್ರಾಧಾನ್ಯತೆಯೇ ಇವರಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಪುರುಷರು ಒಕ್ಕಲು ಮನೆಗಳಿಗೆ ಹೋದಾಗ ಮಹಿಳೆಯರೆ ಎಲ್ಲ ವ್ಯವಹಾರ ನೋಡಿಕೊಳ್ಳುತ್ತಾರೆ. ಕೆಲವು ಸಂದರ್ಭ ಹೆಳವರು ಒಕ್ಕಲು ಮನೆಗಳಿಗೆ ಐದು–ಆರು ತಿಂಗಳು ಹೋಗುವುದರಿಂದ ಆಗ ಹೆಂಡತಿ, ಮಕ್ಕಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾರೆ. ಆಗ ಮನೆಮುಂದೆ ವಯಸ್ಸಾದ ಮುದುಕರನ್ನೋ ಅಥವಾ ಚಿಕ್ಕ ಮಕ್ಕಳನ್ನೋ ಬಿಟ್ಟು ಹೋಗುತ್ತಾರೆ. ಕೆಲವು ಬಾರಿ ಮನೆ ಬೀಗ ಹಾಕಿ ಕುರಿ, ಕೋಳಿ, ದನಕರುಗಳನ್ನು ಸಹ ಜೊತೆಯಲ್ಲಿ ಒಯ್ಯುತ್ತಾರೆ. ಇವರು ಹಲವಾರು ಗುಂಪುಗಳಾಗಿ ಊರ ಹೊರಗಿನ ಬಯಲು ಜಾಗದಲ್ಲಿ ನೀರಿನ ಸೌಲಭ್ಯ ಮತ್ತು ಮರದ ನೆರಳು ಇರುವ ಕಡೆಗಳಲ್ಲಿ ತಮ್ಮ ಎತ್ತಿನಗಾಡಿ, ದನ, ಕರು, ಕುರಿ, ಕೋಳಿಗಳ ಜೊತೆಗೆ ಹಲವು ದಿನಗಳವರೆಗೆ ಬೀಡು ಬಿಡುತ್ತಾರೆ. ಆ ಊರಿನಲ್ಲಿ ವಂಶಾವಳಿ ಹೇಳುವು ಮುಗಿದ ನಂತರ ಮುಂದಿನ ಊರಿಗೆ ಪ್ರಯಾಣ ಬೆಳೆಸುತ್ತಾರೆ. ಒಕ್ಕಲು ಮನೆಗಳ ಕುಲ ವೃತ್ತಾಂತ ಹೇಳುವ ಪದ್ಧತಿ ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಹೀಗೆ ಬೆಳೆದು ಬಂದಿರುತ್ತದೆ. ತಂದೆಯು ಮಕ್ಕಳು ಚಿಕ್ಕವರಿರುವಾಗಲೇ ಕುಲವೃತ್ತಾಂತ ಹೊಗಳುವುದನ್ನು ಮತ್ತು ದಾಖಲಿಸಿಕೊಳ್ಳುವುದನ್ನು ಕಲಿಸಿರುತ್ತಾನೆ. ಇವರು ಶಾಲೆಗೆ ಹೋಗದಿದ್ದರೂ ತಂದೆಯಿಂದ ಅಲ್ಪ, ಸ್ವಲ್ಪ ಅಕ್ಷರ ಜ್ಞಾನ ಪಡೆದಿರುತ್ತಾರೆ.

**ಆಸ್ತಿ ವಿಭಜನೆ**

ಪಾರಂಪರಿಕ ವೃತ್ತಿ ಅನುಸರಿಸುತ್ತಿರುವ ಹೆಳವರಿಗೆ ಅಂತ ಹೇಳಿಕೊಳ್ಳುವಂತಹ ಆಸ್ತಿ ಏನು ಇಲ್ಲ. ಇವರು ವಾಸಿಸುವ ಮನೆಗಳು ತೆಂಗಿನ ಗರಿ ಅಥವಾ ಹುಲ್ಲಿನಿಂದ ನಿರ್ಮಿಸಿದ ಗುಡಿಸಲುಗಳಾಗಿರುತ್ತವೆ. ಕೆಲವರು ಮಣ್ಣಿನ ಗೋಡೆಗಳಿರುವ ಚಿಕ್ಕ ಮನೆಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಇತ್ತೀಚೆಗೆ ಕೆಲವರಿಗೆ ಆಶ್ರಯ ಮನೆಗಳು ಸಿಕ್ಕಿವೆ. ಇನ್ನೂ ಜಮೀನಿನ ವಿಷಯಕ್ಕೆ ಬಂದರೆ ಇವರು ಕೃಷಿಕರನ್ನೇ ಅವಲಂಬಿಸಿ ಬದುಕುವ ಸಮುದಾಯವಾಗಿರುವುದರಿಂದ

ಜಮೀನು ಕಡಿಮೆ. ಇರುವ ಜಮೀನನ್ನು ಸ್ಥಳಿಯರಿಗೆ ಉಳುಮೆಗೆ ಕೊಡುತ್ತಾರೆ. ಹಿಗಾಗಿ ಇವರಿಗೆ ಒಕ್ಕಲು ಮನೆಗಳೇ ಆಸ್ತಿ. ಮಕ್ಕಳು ದೊಡ್ಡವರಾದ ಮೇಲೆ ತಂದೆ ಅವರಿಗೆ ಮದುವೆ ಮಾಡಿ ಒಕ್ಕಲು ಮನೆಗಳನ್ನು ಹಂಚಿಕೊಡುತ್ತಾನೆ. ಇವರಲ್ಲಿ ಯಾರಿಗಾದರು ಹಣದ ಸಮಸ್ಯೆ ಎದುರಾದರೆ ತಮ್ಮ ಚಪ್ಪೋಡುಗಳನ್ನು ಸಮುದಾಯದ ಬೇರೆ ವ್ಯಕ್ತಿಗೆ ಒತ್ತೆ ಇಟ್ಟು ಹಣ ಪಡೆಯುತ್ತಾರೆ. ಹೀಗೆ ಸಾಲಕೊಟ್ಟ ವ್ಯಕ್ತಿ ಸಾಲಪಡೆದ ವ್ಯಕ್ತಿಯ ಸುಪರ್ದಿಗೆ ಬರುವ ಒಕ್ಕಲು ಮನೆಗಳ ಕುಲವೃತ್ತಾಂತ ಹೇಳಿ ಧವಸ, ಧಾನ್ಯ ಪಡೆಯುವ ಹಕ್ಕನ್ನು ಹೊಂದಿರುತ್ತಾನೆ. ಸಾಲ ಪಡೆದ ವ್ಯಕ್ತಿ ಹಣ ಹಿಂದುರಿಗಿಸಿದ ನಂತರ ಅವನ ಚಪ್ಪೋಡುಗಳನ್ನು ಮರಳಿ ಪಡೆಯುತ್ತಾನೆ. ಪಾರಂಪರಿಕ ವೃತ್ತಿ ಬೇಡವೆನಿಸಿದಾಗ ಅಥವಾ ಆರ್ಥಿಕ ಅಡಚಣೆ ಇರುವ ವ್ಯಕ್ತಿ ತನ್ನ ಸುಪರ್ದಿಗೆ ಬರುವ ಗ್ರಾಮಗಳನ್ನು ಮಾರುವ ಪದ್ಧತಿಯೂ ಇದೆ.

**ಆಹಾರ ಪದ್ಧತಿ**

ಪ್ರಪಂಚದಲ್ಲಿ ಬದುಕುವ ಪ್ರತಿಯೊಂದು ಜೀವಿಗೂ ಆಹಾರ ಅತ್ಯವಶ್ಯಕವಾಗಿದೆ. ಆದಿ ಕಾಲದಿಂದಲೂ ಮಾನವ ತನ್ನ ಹೊಟ್ಟೆಪಾಡಿಗಾಗಿ ಆಹಾರ ಅನ್ವೇಷಣೆ ಮಾಡುತ್ತಾ ಹಗಲು ರಾತ್ರಿ ಶ್ರಮ ಪಡುತ್ತಿದ್ದಾನೆ. ತನ್ನದೇ ಆದ ಪಾರಂಪರಿಕ ಜ್ಞಾನ, ಶಿಸ್ತುಗಳಿಂದ ಶ್ರಮ ವ್ಯಯಿಸಿ ತನ್ನ ದೈನಂದಿನ ಆಹಾರ ಪೂರೈಸಿಕೊಳ್ಳುತ್ತಿದ್ದಾನೆ. ಆಯಾ ಪರಿಸರದಲ್ಲಿ ಬೆಳೆಯುವ ಆಹಾರ ಪದಾರ್ಥಗಳು ಅಲ್ಲಿಯ ಜನರ ಬಹುಮುಖ್ಯ ಆಹಾರವಾಗಿರುತ್ತದೆ.

ಹೆಳವರು ಇದಕ್ಕೆ ಭಿನ್ನವಾಗಿಲ್ಲ. ಅಲ್ಲದೆ ಇವರು ಕೃಷಿಕರನ್ನೆ ಅವಲಂಬಿಸಿ ಬದುಕುವರಾಗಿ ರುವುದರಿಂದ ಒಕ್ಕಲು ಮನೆಯವರು ದಾನವಾಗಿ ನೀಡುವ ಧವಸ-ದಾನ್ಯಗಳೇ ಇವರ ಆಹಾರ ಪದಾರ್ಥಗಳಾಗಿವೆ. ಹೆಚ್ಚಾಗಿ ಜೋಳ, ರಾಗಿ, ಭತ್ತ, ಸಜ್ಜೆ ಮುಂತಾದುವನ್ನು ಬಳಸುತ್ತಾರೆ. ಇವರಲ್ಲಿ ಮಾಂಸಹಾರಿಗಳು ಮತ್ತು ಸಸ್ಯಹಾರಿಗಳರ್ವರೂ ಕಂಡುಬರುತ್ತಾರೆ. ಮಾಂಸ ಆಹಾರ ತಮ್ಮಲ್ಲಿ ನಿಷಿದ್ಧವಿದ್ದು ಇತ್ತೀಚೆಗೆ ಅದನ್ನು ಕಲಿತಿರುವುದಾಗಿ ಹೆಳುತ್ತಾರೆ.

**ಹೆಸರುಗಳು**

ಸಾಂಪ್ರದಾಯಿಕ ವೃತ್ತಿ ನಿರ್ವಹಿಸುತ್ತಿರುವ ಹೆಳವರಲ್ಲಿ, ಹೆಸರು ತುಂಬಾ ವಿಭಿನ್ನವಾಗಿವೆ. ಸ್ತ್ರೀ-ಪುರುಷರಿಗೆ ದೇವರ ಹೆಸರುಗಳಿರುವುದೇ ಜಾಸ್ತಿ. ಅಲ್ಲದೆ ತಮಗೆ ಜನಿಸುವ ಮಕ್ಕಳು, ಮೊಮ್ಮಕ್ಕಳಿಗೆ ಸತ್ತು ಹೋಗಿರುವ ಹಿರಿಯರ ಹೆಸರಿಡುತ್ತಾರೆ. ಏಕೆಂದರೆ ಪುನರ್‌ಜನ್ಮದ ಕಲ್ಪನೆಯಲ್ಲಿ ಇವರಿಗೆ ತುಂಬಾ ನಂಬಿಕೆ ಇದೆ.

ಉದಾಹರಣೆಗೆ ಪುರುಷರಿಗಾದರೆ ಲಕ್ಕಪ್ಪ, ಕೆಂಚಪ್ಪ, ಲಗಮಣ್ಣ, ಯಮನಪ್ಪ, ಇತ್ಯಾದಿ. ವಿಚಿತ್ರವೆಂದರೆ ಒಂದೇ ಮನೆಯಲ್ಲಿರುವ ಕೆಲವರ ಹೆಸರು ಹೀಗಿವೆ. ದೊಡ್ಡಯಲ್ಲಪ್ಪ, ಸಣ್ಣಯಲ್ಲಪ್ಪ, ದೊಡ್ಡಹಣಮಂತ, ಸಣ್ಣಹಣಮಂತ, ಇತ್ಯಾದಿ. ಮಹಿಳೆಯರಿಗಾದರೆ ಮರಿಯವ್ವ, ಕೆಂಚವ್ವ, ದುರಗವ್ವ, ದ್ಯಾಮವ್ವ, ಹುಲಿಗೆವ್ವ ಇತ್ಯಾದಿ.

ಇತ್ತೀಚೆಗೆ ಇವರಲ್ಲೂ ಹೊಸ ರೀತಿಯ ಹೆಸರುಗಳಡುವ ಸೋಕಿ ಕಂಡು ಬರುತ್ತಿದೆ. ಆದರೆ ಕರೆಯುವುದು ಮಾತ್ರ ಹೀಗೆ ಸಚಿನ್ ಎಂದಿದ್ದರೆ ಸಚ್ಯಾ ಎನ್ನುವುದು. ಮಾಲಾಶ್ರೀ ಎಂದಿದ್ದರೆ ಮಾಲಪ್ಪ ಎಂದು ಕರೆಯುವುದು. ಪ್ರಿಯಾಂಕ ಎಂದಿದ್ದರೆ ಪಿರಪ್ಪ ಎನ್ನುವುದು ಇತ್ಯಾದಿ. ಇವರ ಶಾಲಾ. ದಾಖಲಾತಿಯನ್ನು ನೋಡಿದಾಗ ಮಾತ್ರ ಇವರ ನಿಜವಾದ ಹೆಸರು ಗೊತ್ತಾಗುತ್ತದೆ.

**ಉಡಿಗೆ-ತೊಡುಗೆಗಳು**

ಸಾಂಪ್ರದಾಯಿಕವಾಗಿ ವೃತ್ತಿ ಅನುಸರಿಸುವ ಹೆಳವರ ಉಡುಗೆ-ತೊಡುಗೆಗಳು ಸರಳ ರೀತಿಯ ಬಡವರ ಉಡುಗೆ, ತೊಡುಗೆಗಳಾಗಿವೆ. ಆದರೆ ಒಕ್ಕಲು ಮನೆಗಳಿಗೆ ಹೋಗುವಾಗ ಮಾತ್ರ ಒಕ್ಕಲು ಮನೆಯವರು ದಾನವಾಗಿ ನೀಡಿದ ಕಪ್ಪುಕೋಟು. ಶರ್ಟು, ಬಿಳಿ ದೊತರ ಹಾಕಿಕೊಳ್ಳುತ್ತಾರೆ. ಹೆಗಲ ಮೇಲೆ ಕೆಂಪು ಶಾಲು, ತಲಗೆ ಹಳದಿ ರುಮಾಲು, ಕೈಯಲ್ಲಿ ಗಂಟೆ, ಹಣೆಗೆ, ಮೈಯಿಗೆ ವಿಭೂತಿ ಧರಿಸಿರುತ್ತಾರೆ. ಕೈಬೆರಳಲ್ಲಿ ತಾಮ್ರದ ಉಂಗುರ, ಕಿವಿಯಲ್ಲಿ ಮುರುವು ಧರಿಸಿರುತ್ತಾರೆ. ಒಕ್ಕಲು ಮನೆಗಳಿಗೆ ಬಂದಾಗ ಇವರು ಜನಸಾಮಾನ್ಯರಿಗಿಂತ ಭಿನ್ನವಾಗಿಯೇ ಕಾಣುತ್ತಾರೆ.

**ಮಹಿಳೆಯರ ಉಡುಗೆ ತೊಡುಗೆಗಳು:** ಮನೆಯಲ್ಲಿ ಇದ್ದಾಗ ಒಕ್ಕಲುಮನೆಗಳಿಗೆ ಹೋದಾಗಲು ಒಂದೇ ರೀತಿ ಇರುತ್ತವೆ. ಇವರು ಹೆಚ್ಚಾಗಿ ಒಕ್ಕಲುಮನೆಯವರು ಧಾನವಾಗಿಕೊಟ್ಟ ಸೀರೆ, ಕುಪ್ಪಸ ಧರಿಸುತ್ತಾರೆ ಕೈ ತುಂಬಾ ಗಾಜಿನ ಬಳೆ, ಕೊರಳಲ್ಲಿ ಕರಿಮಣಿಸರ, ಹಣೆಯಲ್ಲಿ ಕುಂಕುಮ, ಹಣೆ, ಕೆನ್ನೆ, ಗಲ್ಲ ಮತ್ತು ಮುಂಗೈಗಳ ಮೇಲೆ ವಿವಿಧ ವಿನ್ಯಾಸದ ಹಚ್ಚೆ ಹಾಕಿಸಿ ಕೊಂಡಿರುತ್ತಾರೆ.

ಇತ್ತೀಚೆಗೆ ಆಧುನಿಕ ಗಾಳಿ ಇವರಲ್ಲು ಬೀಸಿದೆ. ಇಂದಿನ ಹುಡುಗರು ವಿಚಿತ್ರಾಕಾರದ ಪ್ಯಾಂಟು, ಶರ್ಟು ಧರಿಸುತ್ತಿದ್ದಾರೆ. ಹುಡಿಗಿಯರು ಚುಡಿದಾರ, ನೈಟಿ ಧರಿಸುತ್ತಿದ್ದಾರೆ.

**ನ್ಯಾಯ ತಿರ್ಮಾನ**

ಹೆಳವ ಸಮುದಾಯವು ತನ್ನದೆ ಆದ ಕಟ್ಟುಪಾಡುಗಳನ್ನು ಸಾಮಾಜಿಕವಾಗಿ ಇಟ್ಟುಕೊಂಡಿದ್ದು ತಾವು ವಾಸ ಇರುವ ಸ್ಥಳಗಳಲ್ಲಿ ಸಮುದಾಯದಲ್ಲಿ ಒಬ್ಬ ಕಟ್ಟೆಮನೆ ಗೌಡ ಇಬ್ಬರು ಬುದ್ಧಿವಂತರು. ಒಬ್ಬ ಭಂಡಾರಿ. ಒಬ್ಬಕೋಲಕಾರ ಈ ರೀತಿ ಐದು ಜನರ ಸಮಿತಿ ಇದ್ದು ಸಮುದಾಯದ ಆಗುಹೋಗುಗಳನ್ನು ನೋಡಲು ಭಾಗಿಗಳಾಗಿದ್ದು ಸಮುದಾಯದ ವ್ಯಾಜ್ಯಗಳನ್ನು ಅವರೇ ತಿರ್ಮಾನ ಮಾಡುತ್ತಾರೆ ಸಮುದಾಯದವರು ಆ ತಿರ್ಮಾನವನ್ನು ಒಪ್ಪಿಕೊಳ್ಳುವ ಮೂಲಕ ಗೌರವಪೂರ್ವಕವಾಗಿ ಸ್ವೀಕರಿಸುತ್ತಾರೆ. ಕೆಲವರು ವ್ಯತಿರಿಕ್ತವಾಗಿ ನಡೆದುಕೊಂಡರೆ ಅಂತಹವರಿಗೆ ಸಾಮಾಜಿಕವಾಗಿ ಬಹಿಷ್ಕಾರ ಹಾಕುತ್ತಾರೆ. ಅಲ್ಲದೆ ಇವರು ಬೇರೆ ಸಮುದಾಯ ಗಳನ್ನು ಅವಲಂಬಿಸಿರುವುದರಿಂದ ಅವರ ಕಟ್ಟು ನಿಟ್ಟುಗಳಿಗೂ ಒಳಪಟ್ಟು ಜೀವನ ನಡೆಸುತ್ತಾರೆ.

ಕುಲ ಪಂಚಾಯಿತಿಯಲ್ಲಿ ಎಲ್ಲರ ಅಹವಾಲುಗಳನ್ನು ತಿಳಿದುಕೊಂಡು ಪಂಚಾಯಿತಿ ತಿರ್ಮಾನ ನೀಡಲಾಗುತ್ತದೆ. ನ್ಯಾಯಪಂಚಾಯಿತಿಯಲ್ಲಿ ಇಡೀ ಸಮೂಹದ ಒಪ್ಪಿಗೆಯನ್ನು ಪಡೆಯುವುದರಿಂದ ತಿರ್ಮಾನವು ಹೆಚ್ಚು ನ್ಯಾಯಯುತವಾಗಿರುತ್ತದೆ. ಸಮುದಾಯದ ಹೆಣ್ಣು ಬೇರೆ ಜಾತಿಯ ಪುರುಷನೊಂದಿಗೆ ದೈಹಿಕ ಸಂಪರ್ಕವಿರಿಸಿಕೊಂಡರೆ, ವಿಧವೆ ವಿವಾಹವಾಗದೆ ಪರಪುರುಷನೊಂದಿಗೆ ಸಂಬಂಧ ಬೆಳೆಸಿದ್ದರೆ ಅಂಥವರನ್ನು ಸಮುದಾಯದಿಂದ ಬಹಿಷ್ಕರಿಸ ಲಾಗುತ್ತದೆ.

ಸಾಮಾನ್ಯವಾಗಿ ಸಭ್ಯರಾಗಿಯೆ ನಡೆದುಕೊಳ್ಳುವ ಹೆಳವರು ಒಮ್ಮೊಮ್ಮೆ ಚಪ್ಪಲಿಯಿಂದ ಹೊಡೆದಾಡಿದರೆ ಅವಾಚ್ಯ ಶಬ್ಧವನ್ನು ನುಡಿದರೆ ಅಂಥವರಿಗೆ ಪಂಚಾಯ್ತಿಯಲ್ಲಿ ಬಹಿಷ್ಕಾರ ಹಾಕಿ ತಪ್ಪು ದಂಡ ವಿಧಿಸಲಾಗುತ್ತದೆ. ಇಂದು ಮೊದಲಿನಷ್ಟು ಬಿಗಿಯಾಗಿ ನ್ಯಾಯ ಪಂಚಾಯಿತಿ ಗಳು ನಡೆಯದೇ ಇದ್ದರೂ ಇನ್ನೂ ಪೂರ್ಣ ಜೀವವನ್ನು ಇವು ಕಳೆದುಕೊಂಡಿಲ್ಲ ಎನ್ನಬಹುದು.

**ಹಬ್ಬಗಳು**

ಹೆಳವ ಸಮುದಾಯದ್ದೆ ಎನ್ನುವ ಯಾವ ವಿಶೇಷ ಹಬ್ಬಗಳು ಇವರಿಗೆ ಇಲ್ಲ. ಸ್ಥಳಿಯವಾಗಿ ಹಿಂದುಗಳಲ್ಲಿ ಪ್ರಚಲಿತದಲ್ಲಿರುವ ಎಲ್ಲ ಹಬ್ಬ-ಹರಿದಿನಗಳನ್ನು ಹೆಳವರು ಆಚರಿಸುತ್ತಾರೆ. ಕಾರಹುಣ್ಣಿಮೆ, ನಾಗರಪಂಚಮಿ, ಮಹಾನವಮಿ, ದೀಪಾವಳಿ, ಹೋಳಿ ಮತ್ತು ಯುಗಾದಿ ಇವುಗಳು ಹೆಳವರು ಆಚರಿಸುವ ಪ್ರಮುಖ ಹಬ್ಬಗಳಾಗಿವೆ.

**ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಒಳಗಿನ ಸಾಮಾಜಿಕ ಸಂಬಂಧಗಳು**

ಹೆಳವರು ಮೂಲತಃ ಒಂದೇ ಸಮುದಾಯದವರಾಗಿದ್ದು ಕಾಲಾಂತರದಲ್ಲಿ ಇವರು ತಮ್ಮ ಜೀವನೋಪಾಯಕ್ಕಾಗಿ ವಿವಿಧ ವೃತ್ತಿಗಳನ್ನು ಅನುಸರಿಸಿರುವುದು ಕಾಲಕ್ರಮೇಣ ವೃತ್ತಿ ಮುಂದುವರಿದಂತೆ ಅವರಲ್ಲೇ ವಿವಿಧ ಪಂಗಡಗಳು ರೂಪಗೊಂಡಿರುವುದು ಕಂಡುಬರುತ್ತದೆ ಮೆಲ್ನೋಟಕ್ಕೆ ಹೆಳವರು ಒಂದೇ ರೀತಿಯ ಸಾಮಾಜಿಕತೆ ಅನುಸರಿಸುತ್ತಿರುವುದು ಕಂಡುಬಂದರೂ ಅವರಲ್ಲೇ ವೃತ್ತಿಗನುಸಾರವಾಗಿ ಸಾಕಷ್ಟು ಭಿನ್ನತೆಗಳಿರುವುದು ಕಂಡುಬರುತ್ತದೆ. ಪ್ರತಿಯೊಂದು ಪಂಗಡದ ಸಾಮಾಜಿಕ ಸ್ಥಿತಿಯನ್ನು ಈ ಕೆಳಗಿನಂತೆ ಕಾಣಬಹುದು.

**ಎತ್ತಿನ ಹೆಳವರು**

ಇವರ ಮೂಲಕಸುಬು ವಂಶಾವಳಿ ಹೆಳುವುದಾಗಿದ್ದು ಇವರು ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡಬರುತ್ತಾರೆ. ಹೆಳವರಲ್ಲಿನ ಇತರ ಪಂಗಡಗಳಿಗಿಂತ ಇವರು ಉತ್ತಮ ಸ್ಥಾನಮಾನ ಗಳನ್ನು ಹೊಂದಿದ್ದು ಇವರಲ್ಲಿ ಕೆಲವರು ಮಾಂಸ ಸೇವನೆ ಮಾಡುವುದಿಲ್ಲ. ಹೀಗಾಗಿ ಇತರ ಪಂಗಡದ ವರು ಇವರನ್ನು ತುಂಬಾ ಗೌರವಿಸುತ್ತಾರೆ. ಇವರು ಇತರ ಪಂಗಡದವರೊಡನೆ ಸಂಬಂಧಗಳನ್ನು ಬೆಳೆಸಲು ಬಯಸುವದಿಲ್ಲ ತಾವು ಇತರ ಪಂಗಡಗಳಿಗಿಂತ ಶ್ರೇಷ್ಠರು ಎಂದು ಭಾವಿಸಿಕೊಂಡಿದ್ದಾರೆ.

**ಗಂಟೆ ಹೆಳವರು**

ಇವರ ವೃತ್ತಿಯು ವಂಶಾವಳಿ ಹೇಳುವುದಾಗಿದ್ದು ಇವರು ಹೊಗಳಲು ಹೋಗುವಾಗ ಕೈಯಲ್ಲಿ ಗಂಟೆಯನ್ನು ಹಿಡಿದುಕೊಂಡು ಹೋಗುತ್ತಾರೆ. ಇವರು ದಕ್ಷಿಣ ಕರ್ನಾಟಕದಲ್ಲಿ ಅಧಿಕವಾಗಿ ಕಂಡುಬರುತ್ತಾರೆ. ಸಾಮಾನ್ಯವಾಗಿ ಇವರು ಮಾಂಸಾಹಾರ ಸೇವನೆ ಮಾಡುತ್ತಾರೆ . ಇವರ ವೃತ್ತಿಯಿಂದಾಗಿ ಇತರ ಪಂಗಡಗಳಿಗಿಂತ ಇವರ ಸ್ಥಾನಮಾನ ಉತ್ತಮವಾಗಿದೆ. ಇವರು ಚಾಪೆಹೆಳವರನ್ನು, ಹಂದಿ ಹೆಳವರನ್ನು ಮತ್ತು ದೂದಿ ಹೆಳವರನ್ನು ತಮಗಿಂತ ನಿಕೃಷ್ಟರೆಂದು ಭಾವಿಸಿದ್ದು ಅವರೊಡನೆ ಸಂಬಂಧ ಬೆಳೆಸಲು ಬಯಸುವುದಿಲ್ಲ.

**ಸಾಧು ಹೆಳವರು**

ಇವರು ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಂಡುಬರುತ್ತಾರೆ. ಇವರು ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಇವರು ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ತಾವು ಲಿಂಗಾಯಿತರೆಂದು ಹೇಳಿಕೊಳ್ಳುತ್ತಾರೆ. ಇತರ ಹೆಳವ ಪಂಗಡದವರೊಡನೆ ಬೆರೆಯಲು ಇವರು ಬಯಸುವದಿಲ್ಲ.

**ಊರ ಹೆಳವರು**

ಇವರು ವ್ಯವಸಾಯ ಮತ್ತು ಪಾರಂಪರಿಕ ವೃತ್ತಿಯಾದ ವಂಶಾವಳಿ ಎರಡನ್ನು ಮಾಡುತ್ತಾರೆ. ಇವರು ಉತ್ತರ ಕರ್ನಾಟಕದಲ್ಲಿ ಅಧಿಕವಾಗಿ ಕಂಡುಬರುತ್ತಾರೆ ಅಲ್ಲದೆ ತಾವು ಮತ್ತು ಎತ್ತಿನ ಹೆಳವರು ಅಣ್ಣ ತಮ್ಮಂದಿರೆಂದು ಹೇಳಿಕೊಳ್ಳುತ್ತಾರೆ. ಇವರ ಸ್ಥಾನಮಾನಗಳು ಎತ್ತಿನ ಹೆಳವರಂತೆ ಇವೆ.

**ತಿತ್ತಿ ಹೆಳವರು**

ಇವರು ಚರ್ಮದ ತಿತ್ತಿಯನ್ನು ಬಳಸಿಕೊಂಡು ಒಕ್ಕಲು ಮನೆಗಳಿಗೆ ಹೋಗಳಲು ಹೋಗುತ್ತಾರೆ. ಆಂಧ್ರದ ಗಡಿ ಭಾಗಗಳಲ್ಲಿ ಹೆಚ್ಚಾಗಿ ಕಾಣುವ ಇವರು ಎತ್ತಿನ ಹೆಳವರು ಮತ್ತು ಗಂಟೆ ಹೆಳವರಿಗಿಂತ ಕಡಿಮೆ ಸ್ಥಾನಮಾನ ಹೊಂದಿದ್ದರೂ ಹಂದಿ ಹೆಳವರು, ಚಾಪೆ ಹೆಳವರು ಮತ್ತು ದೂದಿ ಹೆಳವರಿಗಿಂತ ಉತ್ತಮ ಸ್ಥಾನಮಾನ ಹೊಂದಿದ್ದಾರೆ.

**ತಂಬೂರಿ ಹೆಳವರು**

ಆಂಧ್ರದಲ್ಲಿ ಹೆಚ್ಚಾಗಿ ಕಂಡುಬರುವ ಇವರು ೪-೫ ಜನ ಸೇರಿ ಹಾಡಿನ ಮೂಲಕ ಕುಲ ವೃತ್ತಾಂತ ಹೆಳುತ್ತಾರೆ. ಅಲ್ಲದೆ ದೇವರ ಪದಗಳನ್ನು ಹಾಡುತ್ತಾ ಪೇಟೆಗಳಲ್ಲಿ ಜನರಿಂದ ಹಣ ಸಂಗ್ರಹಿಸುತ್ತಾರೆ. ಇವರು ಎತ್ತಿನ ಹೆಳವರು, ಗಂಟೆಹೆಳವರು ಮತ್ತು ಊರ ಹೆಳವರಿಗಿಂತ ಕಡಿಮೆ ಸ್ಥಾನಮಾನ ಹೊಂದಿದ್ದಾರೆ. ಇವರು ಹಾಡುಗಳನ್ನು ಹಾಡುತ್ತಾ ಜನರಿಂದ ಹಣ ಸಂಗ್ರಹಿಸುವುದರಿಂದ ಎಲ್ಲ ಪಂಗಡದವರು ಇವರನ್ನು ಕೀಳಾಗಿ ಕಂಡರೂ ಇವರು ಹಂದಿ ಹೆಳವರೊಡನೆ ಮತ್ತು ಚಾಪೆ ಹೆಳವರೊಡನೆ ಸಂಬಂಧ ಬೆಳೆಸಲು ಹಿಂಜರಿಯುತ್ತಾರೆ.

**ಕಂಬಿ ಹೆಳವರು**

ಚಾಪೆಯಿಂದ ತಯಾರಿಸಿದ ೨ ಚೀಲಗಳನ್ನು ಒಂದು ಉದ್ದನೆಯ ಕೋಲಿನ ತುದಿಗೆ ಕಟ್ಟಿಕೊಂಡು ಒಂದು ಕೈಯಲ್ಲಿ ಗಂಟೆಯನ್ನು ಹಿಡಿದುಕೊಂಡು ಹೋಗಿ ಕುಲ ವೃತ್ತಾಂತ ಹೇಳಿ ಅವರು ಕೊಡುವ ಧವಸ, ಧಾನ್ಯ ಪಡೆಯುವ ಇವರು ಮಾಂಸಾಹಾರವನ್ನು ಸೇವಿಸುವುದಿಲ್ಲ. ಇವರು ಇತರ ಹೆಳವ ಪಂಗಡಗಳಿಗಿಂತ ಉತ್ತಮ ಸಾಮಾಜಿಕ ಸ್ಥಾನಮಾನ ಹೊಂದಿದ್ದಾರೆ. ಇತರ ಪಂಗಡಗಳಿಂದ ಪ್ರತ್ಯೇಕವಾಗಿಯೇ ಇರಲು ಬಯಸುತ್ತಾರೆ.

**ಅಡವಿ ಹೆಳವರು**

ಸುರಪುರ ತಾಲೂಕಿನ ಕಕ್ಕೇರಿಯ ಅಡವಿಯಲ್ಲಿ ವಾಸಿಸುವ ಇವರು ಚಾಪೆ, ಬುಟ್ಟಿಯನ್ನು ಹೆಣೆಯುವುದರ ಜೊತೆಗೆ ಬೇಟೆಯನ್ನು ಆಡುತ್ತಾರೆ. ಊರಿನ ಜನರ ಸಂಪರ್ಕದಿಂದ ದೂರವಿರುವ ಇವರು ಬೇರೆ ಪಂಗಡದ ಹೆಳವರೊಡನೆ ಸೇರಲು ಬಯಸುವದಿಲ್ಲ ಇತರ ಪಂಗಡದ ಹೆಳವರು ಕೂಡ ಇವರು ಅಡವಿಯಲ್ಲಿ ವಾಸಿಸುವುದನ್ನು ಕಂಡು ಅನಾಗರಿಕರೆಂದು ಕೀಳಾಗಿ ಕಾಣುತ್ತಾ ಅವರೊಡನೆ ಸಂಬಂಧ ಬೆಳೆಸಲು ಬಯಸುಬದಿಲ್ಲ.

**ಮಂದಲ ಹೆಳವರು**

ಮೈಸೂರು, ಕೋಲಾರ, ಬಳ್ಳಾರಿ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುವ ಇವರು ಗಿಡಮೂಲಿಕೆ ಗಳಿಂದ ಔಷಧಿಗಳನ್ನು ತಯಾರಿಸಿ ಪೇಟೆಗಳಲ್ಲಿ ಮಾರುತ್ತಾರೆ. ಹೆಳವರ ಪಂಗಡಗಳಲ್ಲಿ ಇವರ ಸಾಮಾಜಿಕ ಸ್ಥಾನಮಾನಗಳು ಉತ್ತಮವಾಗಿವೆ. ಗಂಟೆಹೆಳವರು, ಎತ್ತಿನ ಹೆಳವರು ಇವರೊಡನೆ ಸಂಬಂಧ ಬೆಳೆಸಲು ಬಯಸುತ್ತಾರೆ. ಮಂದಲ ಹೆಳವರು ಕೂಡ ಚಾಪೆ ಹೆಳವರೊಡನೆ,ಹಂದಿ ಹೆಳವರೊಡನೆ ಸಂಬಂಧ ಬೆಳೆಸಲು ಬಯಸುವುದಿಲ್ಲ ಅಲ್ಲದೆ ಅವರ ಹಬ್ಬ,ಹರಿದಿನಗಳಲ್ಲಿ ಪಾಲ್ಗೊಳ್ಳುವುದಿಲ್ಲ ಮತ್ತು ಅವರನ್ನೂ ಕರೆಯುವುದಿಲ್ಲ.

**ಕೂಕಣಿ ಹೆಳವರು**

ರಾಯಚೂರು, ಬಳ್ಳಾರಿ ಭಾಗಗಳಲ್ಲಿ ಕಾಣುವ ಇವರು ಕಿವಿಯಲ್ಲಿನ ಕೂಕಣಿ ತೆಗೆಯುವರು ಮತ್ತು ಕೂದಲನ್ನು ತುಂಬಿಕೊಳ್ಳುತ್ತಾರೆ ಜೊತೆಗೆ ಕಸಬರಿಗೆ, ಈಚಲ ಚಾಪೆಯನ್ನು ಮಾರುತ್ತಾರೆ. ಇವರೊಡನೆ ಹಂದಿ ಹೆಳವರು, ಚಾಪೆ ಹೆಳವರು ಸಂಬಂಧ ಬೆಳೆಸುತ್ತಾರೆ. ಇತರ ಹೆಳವರಿಗಿಂತ ಇವರ ಸ್ಥಾನಮಾನ ಕಡಿಮೆ ಇದೆ.

**ದೂದಿ ಹೆಳವರು**

ಇವರು ಆಫಿನ ತೆನೆಯಿಂದ ದೂದಿಯನ್ನು ತಯಾರಿಸಿ ಮಾರುವುದರ ಜೊ ತೆಗೆ ಹಂದಿಯನ್ನು ಸಾಕುತ್ತಾರೆ. ಹೀಗಾಗಿ ಹಂದಿ ಹೆಳವರು ಮತ್ತು ಚಾಪೆ ಹೆಳವರ ಹೊರತಾಗಿ ಇತರ ಪಂಗಡದವರು ಇವರನ್ನು ಯಾವುದೇ ಮದುವೆ ಸಮಾರಂಭಗಳಿಗೆ, ಆಹ್ವಾನಿಸುವುದಿಲ್ಲ.

ಅವರ ಮನೆಗಳಿಗೂ ಹೋಗುವುದಿಲ್ಲ. ತಾವು ಅವರಿಗಿಂತಲು ಶ್ರೇಷ್ಠರು ಎಂಬ ಕಲ್ಪನೆ ಹೊಂದಿರುವುದು ಇದಕ್ಕೆ ಕಾರಣವಾಗಿದೆ.

**ಚಾಪೆ ಹೆಳವರು**

ಗುಲಬರ್ಗಾ, ಬೀದರ್, ಬಳ್ಳಾರಿ, ಮುಂತಾದ ಭಾಗಗಳಲ್ಲಿ ಕಂಡುಬರುವ ಇವರು ಚಾಪೆಯನ್ನು ಮಾರಿ ಜೀವನ ಸಾಗಿಸುತ್ತಾರೆ. ಹಿಂದೆ ತಾವು ಕೂಡ ಒಕ್ಕಲು ಮನೆಗಳಿಗೆ ಹೋಗುತ್ತಿದ್ದು ಈಗ ಬಿಟ್ಟಿರುವುದಾಗಿ ಹೆಳುತ್ತಾರೆ. ಇವರಲ್ಲಿ ಕೆಲವರು ಹಂದಿಯನ್ನು ಸಾಕುತ್ತಾರೆ. ಇವರು ಮಾಡುವ ವೃತ್ತಿಯಿಂದಾಗಿ ಇತರ ಹೆಳವರು ಇವರನ್ನು ಕೀಳಾಗಿ ಕಾಣುತ್ತಾರೆ. ಎತ್ತಿನ ಹೆಳವರು, ಗಂಟೆ ಹೆಳವರು ಮುಂತಾದವರು ಇವರೊಡನೆ ಸಂಬಂಧ ಬೆಳೆಸಲು ಬಯಸುವುದಿಲ್ಲ. ಅಷ್ಟೇ ಏಕೆ ಚಾಪೆ ಹೆಳವರು ತಮ್ಮ ಸಮುದಾಯದವರೇ ಅಲ್ಲ ಎನ್ನುವವರಿಗೆನೂ ಕೊರತೆ ಇಲ್ಲ.

**ಹಂದಿ ಹೆಳವರು**

ಇವರು ಬೀದರ್, ಗುಲಬರ್ಗಾ, ಬಳ್ಳಾರಿ ಮಂತಾದ ಕಡೆಗಳಲ್ಲಿ ಕಂಡುಬರುತ್ತಾರೆ. ಇವರು ಹಂದಿಯನ್ನು ಸಾಕುತ್ತಾರೆ. ಇವರ ಹೆಣ್ಣು ಮಕ್ಕಳು ಮತ್ತು ಚಿಕ್ಕಮಕ್ಕಳು ಬಡತನದ ಬೇಗೆಯಿಂದಾಗಿ ಭಿಕ್ಷೆಯನ್ನು ಬೇಡುತ್ತಾರೆ. ಇವರ ಸಾಮಾಜಿಕ ಸ್ಥಿತಿಗತಿಗಳು ಚಾಪೆ ಹೆಳವರಿಗಿಂತ ಭಿನ್ನವಾಗಿಯೇನು ಇಲ್ಲ.

ಭಾರತೀಯ ಜನಸಂಖ್ಯೆಗೆ ಹೋಲಿಸಿದಾಗ ಹೆಳವ ಸಮುದಾಯವು ಒಂದು ಚಿಕ್ಕ ಸಮುದಾಯವಾಗಿ ಕಂಡರೂ ಇವರಲ್ಲೇ ಆಂತರಿಕವಾಗಿ ಶ್ರೇಷ್ಠ-ಕನಿಷ್ಠ, ಮೇಲು-ಕೀಳು ಎಂಬ ಭಾವನೆ ಹೊಂದಿದ್ದು ತಮ್ಮ, ತಮ್ಮಲ್ಲೇ ಸಾಮಾಜಿಕವಾಗಿ ತಾರತಮ್ಯ ಹೊಂದಿರುವುದನ್ನು ಕಾಣುತ್ತೇವೆ. ಆದರೆ ಇತ್ತೀಚೆಗೆ ಇವರಲ್ಲೂ ಸಹ ಶಿಕ್ಷಣ ಪಡೆದಂತೆ, ಜನ ಬೇರೆ, ಬೇರೆ ವೃತ್ತಿಗಳನ್ನು ಅನುಸರಿಸಿದಂತೆ ಮತ್ತು ತಮ್ಮ ಸಮುದಾಯದವರೆ ಎಲ್ಲ ಪಂಗಡದವರನ್ನು ಸೇರಿಸಿ ಸಭೆ, ಸಮಾರಂಭ ಮಾಡಿ ತಿಳುವಳಿಕೆ ಮೂಡಿಸುತ್ತಿದ್ದಂತೆ ಇವರಲ್ಲಿ ಮನೆ ಮಾಡಿದ್ದ ಮೌಢ್ಯತೆ ಹಂತ, ಹಂತವಾಗಿ ಮಾಯವಾಗುತ್ತಿದೆ. ಇಂದು ಆಧುನಿಕ ಗಾಳಿ ಈ ಸಮುದಾಯದ ಮೇಲೂ ಬಿಸಿರುವುದರಿಂದ ಪಂಗಡಗಳ ನಡುವೆ ಇದ್ದ ತಾರತಮ್ಯತೆ ಈಗ ಕಡಿಮೆಯಾಗಿದೆ. ಸಭೆ, ಸಮಾರಂಭಗಳಲ್ಲಿ ಮದುವೆ, ಹಬ್ಬ, ಹರಿದಿನಗಳಲ್ಲಿ ಎಲ್ಲರೂ ಭಾಗವಹಿಸುತ್ತಿದ್ದಾರೆ. ಅಲ್ಲದೆ ಆರ್ಥಿಕವಾಗಿ ಉತ್ತಮವಾಗಿರುವ, ಒಳ್ಳೆ ಶಿಕ್ಷಣ, ವೃತ್ತಿ, ಸಂಬಳ ಹೊಂದಿರುವ ವ್ಯಕ್ತಿ ಹೆಳವ ಸಮುದಾಯದ ಯಾವ ಪಂಗಡದವರಾಗಿದ್ದರೂ ಸರಿ ಸಂಬಂಧ ಬೆಳೆಸಲು ಹಿಂಜರಿಯುತ್ತಿಲ್ಲ.

**ಪಾರಂಪರಿಕ ವೃತ್ತಿ ಅನುಸರಿಸುವ ಹೆಳವ ಸಮುದಾಯದವರನ್ನು ಇತರ ಸಮುದಾಯದವರು ನೋಡುವ ದೃಷ್ಟಿ**

ಜಾತಿವ್ಯವಸ್ಥೆಯು ಭಾರತೀಯ ಸಮಾಜದ ಪ್ರಧಾನ ಲಕ್ಷಣವಾಗಿದೆ. ಇದರಿಂದಾಗಿಯೇ ಸಮಾಜವು ಹಲವು ಸ್ತರಗಳಾಗಿ ವಿಭಜನೆಗೊಂಡಿದೆ. ಅಲ್ಲದೆ ಜಾತಿವ್ಯವಸ್ಥೆಯ ಮುಖ್ಯ ಉದ್ದೇಶ ಈ ದೇಶದ ಸಮಾಜದ ರಾಜಕೀಯ, ಆರ್ಥಿಕ ವ್ಯವಸ್ಥೆಯನ್ನು ಸಾಮಾಜಿಕ ಏಣಿ, ಶ್ರೇಣಿಗಳ ಮೂಲಕ ಸಮರ್ಥಿಸುವುದೇ ಆಗಿದೆ. ಇದರಿಂದಾಗಿಯೇ ದುಡಿಯುವವರ ಮತ್ತು ದುಡಿಸಿ ಕೊಳ್ಳುವವರ ಮದ್ಯೆ ಅಸಮಾನತೆ ಏರ್ಪಟ್ಟಿದೆ. ಕಾಲದಿಂದ ಕಾಲಕ್ಕೆ ಈ ದೇಶವನ್ನು ನಿಯಂತ್ರಿಸುತ್ತಾ ಬಂದ ಆಳುವ ವರ್ಗ ಬದಲಾದಂತೆ ಇಲ್ಲಿನ ದುಡಿವ ವರ್ಗದ ಜನರ ಜೀವನ ವಿಧಾನಗಳು ಬದಲಾದವೇ ಹೊರತು ಅವರ ಆರ್ಥಿಕ, ರಾಜಕೀಯ ಸ್ಥಾನಮಾನಗಳಲ್ಲಿ ಮಾತ್ರ ಬದಲಾವಣೆ ಕಂಡುಬರಲಿಲ್ಲ. ಏಕೆಂದರೆ ದುಡಿವ ವರ್ಗಗಳು ಮಾತ್ರ ತಮ್ಮ ಸಾಮಾಜಿಕ ಸ್ಥಿತಿ-ಗತಿಗಳನ್ನು ಅನಿವಾರ್ಯವೆಂಬತೆ ಒಪ್ಪಿಕೊಂಡು ಬದುಕುತ್ತಾ ಬಂದಿವೆ.

ಭಾರತದಲ್ಲಿ ವೈಜ್ಞಾನಿಕತೆ, ಆಧುನಿಕತೆ, ತಾಂತ್ರಿಕತೆ ಬಂದಂತೆ ಸಾಂಪ್ರದಾಯಿಕ ಸಮಾಜಗಳು ಬದಲಾಗುತ್ತವೆ ಎಂಬ ಕಲ್ಪನೆ ಇತ್ತು. ಆದರೆ ಇದರಿಂದ ಸಮಾಜವು ಊಳಿಗಮಾನ್ಯ ಸ್ಥಿತಿಯಿಂದ ಬಂಡವಾಳಶಾಹಿಯತ್ತ ಮುಖ ಮಾಡಿತೇ ವಿನಃಹ ಈ ದೇಶದ ಶೋಷಿತರ ಸ್ಥಿತಿಯನ್ನು ಯಾವ ರೀತಿಯಲ್ಲೂ ಬದಲಾಯಿಸಲಿಲ್ಲ. ಇದಕ್ಕೆ ಉದಾಹರಣೆ ಎಂದರೆ ಹೆಳವರೇ ಆಗಿದ್ದಾರೆ. ಬಹಳಷ್ಟು ಹೆಳವರು ಪಾರಂಪರಿಕ ಅಲೆಮಾರಿ ವೃತ್ತಿಯನ್ನು ಅವಲಂಬಿಸಿದ್ದಾರೆ. ಇವರು ಸಾಮಾಜಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ. ಉದ್ದೇಶಪೂರ್ವಕವಾಗಿ ಆಳುವ ವರ್ಗದವರು ಇವರ ಪಾರಂಪರಿಕ ವೃತ್ತಿಯನ್ನು ಜೀವಂತವಾಗಿರಿಸಿಕೊಂಡು ಬಂದಿದ್ದಾರೆ. ದಿನನಿತ್ಯ ಹಿಡಿ ಅನ್ನಕ್ಕೂ ತಮ್ಮನ್ನೇ ಅವಲಂಬಿಸಬೇಕಾದ ಸ್ಥಿತಿ ನಿರ್ಮಿಸಿದ್ದಾರೆ. ದಿನ ಬೆಳಗಾದರೆ ಮೆಲ್ವರ್ಗದವರ ಮನೆ ಬಾಗಿಲ ಬಳಿ ಹೋಗಿ ಕೈ ಚಾಚಿ ನಿಲ್ಲಬೇಕಾಗಿರುವ ಹೆಳವರು ಹೇಗೆ ಅವರಿಂದ ಉತ್ತಮ ಸಾಮಾಜಿಕ ಸ್ಥಾನಮಾನವನ್ನು ನಿರಿಕ್ಷಿಸಲು ಸಾದ್ಯ?.

ಹಿಂದಿನ ಕಾಲದಲ್ಲಿ ಹೆಳವರಿಗೆ ತುಂಬಾ ಗೌರವವಿತ್ತು. ಇವರ ಪಾರಂಪರಿಕ ವೃತ್ತಿಯ ಅವಶ್ಯಕತೆ ಸಮಾಜಕಿತ್ತು. ಆದರೆ ಇಂದು ಭಾರತ ಸರ್ಕಾರ ಜನನ, ಮರಣಗಳನ್ನು ತಾನೇ ದಾಖಲಿಸುತ್ತಿರುವುದರಿಂದ ಇವರ ಪಾರಂಪರಿಕ ವೃತ್ತಿಯ ಅವಶ್ಯಕತೆ ಸಮಾಜಕ್ಕೆ ಬೇಡವಾಗಿದೆ. ಆದರೂ ಹಿರಿಯ ತಲೆಮಾರಿನವರು ಹೆಳವರನ್ನು ಗೌರವ ಭಾವನೆಯಿಂದಲೇ ಕಾಣುತ್ತಾರೆ. ಆದರೆ ಇತ್ತೀಚಿನ ತಲೆಮಾರಿನ ಜನರ ಮನೋಭಾವನೆಗಳು ಬದಲಾಗಿರುವುದರಿಂದ ಹೆಳವರು ಒಕ್ಕಲು ಮನೆಗಳಿಗೆ ಬಂದರೆ ದುಡಿಯಲಾಗದ ಸೋಮಾರಿಗಳೆಂದು ಭಾವಿಸಿ ಅಲ್ಪ, ಸ್ವಲ್ಪ ಕೊಟ್ಟು ಸಾಗಹಾಕುತ್ತಾರೆ.

ಹೆಳವರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಪ್ರಬಲರಲ್ಲದ ಕಾರಣ ಊರಿನ

ನೆರೆ-ಹೊರೆಯ ಸಮುದಾಯದವರು ಕೂಡ ಕೀಳಾಗಿಯೇ ಕಾಣುತ್ತಾರೆ. ಅವರು ಏನೆ ದೌರ್ಜನ್ಯ, ಅವಮಾನ, ಶೋಷಣೆ ಮಾಡಿದರು, ಹೆಳವರು ಮೌನವಾಗಿಯೇ ಸಹಿಸುತ್ತಾರೆ. ಕಾರಣ ಅವರನ್ನು ಅವಲಂಬಿಸಿಯೆ ಬದುಕಬೇಕಾದ ದುಃಸ್ಥಿತಿ ಇವರಿಗೆ ಅನಿವಾರ್ಯವಾಗಿರುವುದು.

**ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಆರ್ಥಿಕತೆ**

ಹೆಳವರು ಸಂಪೂರ್ಣವಾಗಿ ಅಲೆಮಾರಿಗಳು ಅಲ್ಲದ ಇತ್ತ ಸ್ಥಿರ ನೆಲೆ ಉಳ್ಳವರು ಅಲ್ಲದ ಅರೆಅಲೆಮಾರಿಗಳಾಗಿದ್ದಾರೆ. ಇವರ ಮೂಲ ಉದ್ಯೋಗ ವಂಶಾವಳ ಹೇಳುವುದಾಗಿದೆ. ಇವರು ವರ್ಷಕ್ಕೆ ಒಂದುಬಾರಿ ಅಥವಾ ಎರಡುಬಾರಿ ಒಕ್ಕಲು ಮನೆಗಳಗೆ ಹೋಗಿ ಅವರ ಕುಲ ಕೊಂಡಾಡುವುದರ ಮೂಲಕ ಅವರನ್ನು ಮೆಚ್ಚಿಸಿ ಅವರು ಕೊಡುವ ದವಸ, ಧಾನ್ಯ ಹಳೆಬಟ್ಟೆ, ಪಾತ್ರೆ, ಕೆಲವು ಸಂದರ್ಭ ಆ ಮನೆಯಲ್ಲಿ ವಿವಾಹ ಸಮಾರಂಭಗಳಾಗಿದ್ದರೆ ಸ್ವಲ್ಪ ಹಣ ಅಥವಾ ಹಸು, ಕುರಿ, ಕೋಳಗಳನ್ನು ದಾನವಾಗಿ ಪಡೆಯುತ್ತಾರೆ. ಕೆಲವು ಮನೆಯವರು ಮನೆ ಹೆಳವರೆಂದರೆ ಮನೆ ಮಗಳೆಂದು ಅವರು ಬಂದಾಕ್ಷಣ ಸಂಭ್ರಮದಿಂದ ಬರಮಾಡಿಕೊಂಡು ಮುಖ ತೊಳೆಯಲು ನೀರು ಕೊಟ್ಟು ಕಂಬಳ ಹಾಸಿ ಕೂರಿಸಿ ಮನೆಯವರೆಲ್ಲಾ ಕೆಲಸ ಕಾರ್ಯಗಳನ್ನೆಲ್ಲಾ ನಿಲ್ಲಿಸಿ ಹೆಳವನ ಸುತ್ತಲು ಕುಳತು ಅವನು ಹೋಗಳುವುದನ್ನು ಭಾವಪರಶದಿಂದ ಕೇಳ ಆನಂದಿಸಿ ನಂತರ ಅವನು ಕೇಳದಷ್ಟು ದಾನಮಾಡಿ ಜೊತೆಗೆ ಹೊಟ್ಟೆತುಂಬ ಊಟಹಾಕಿ ಖುಷಿಯಿಂದ ಕಳುಹಿಸುವ ಕಾಲವೊಂದಿತ್ತು. ಇಂದಿಗೂ ಸಹ ಕೆಲವು ಹಿರಿಯರು ಹಾಗೆ ಗೌರವಿಸುತ್ತಾರೆ. ಹೆಳವ ಒಂದು ವರ್ಷ ಬರದಿದ್ದರೆ ಬೇರೆ ಪರಿಚಯಸ್ಥರು ಸಿಕ್ಕರೆ ಬರಲು ಹೇಳಕಳುಹಿಸುತ್ತಾರೆ. ಆದರೆ ಇಂತಹ ಜನ ಇಂದು ವಿರಳ ಇಂದು ಬಹುತೇಕ ಜನ ಹೆಳವ ಬಂದರೆ ಬೇಸರದಿಂದಲೆ ಅಲ್ಪ, ಸ್ವಲ್ಪ ದವಸ ಧಾನ್ಯ ಕೊಟ್ಟು ಸಾಗಹಾಕುತ್ತಾರೆ. ಹೆಳವರಲ್ಲಿ ಕೆಲವರು ವಂಶಪಾರಂಪರ್ಯ ವೃತ್ತಿ ಮಾಡುವುದು ಹೆಮ್ಮೆಯ ಕೆಲಸವೆಂದು ಭಾವಿಸಿದರೆ, ಇನ್ನು ಕೆಲವರು ಅನಿವಾರ್ಯವಾಗಿ ಜೀವನ ಸಾಗಿಸಲು ವೃತ್ತಿ ಮುಂದುವರಿಸಿದ್ದಾರೆ.

**ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಆದಾಯ**

| ಕ್ರ.ಸಂ. | ಆದಾಯ | ಮಂಟೂರು | ಜೋಕಾನಟ್ಟಿ |
|---|---|---|---|
| ೧ | ೦೦೦೦-೫೦೦೦ | ೧೬ | ೧೬ |
| ೨ | ೫೦೦೧-೧೦,೦೦೦ | ೦೭ | ೦೫ |
| ೩ | ೧೦,೦೦೧-೨೦,೦೦೦ | ೦೨ | ೦೪ |
| ೪ | ೨೦,೦೦೧-೩೦,೦೦೦ | - | - |
| ೫ | ೩೦,೦೦೧-ಮೆಲ್ಪಟ್ಟು | - | - |
| | ಒಟ್ಟು ಕುಟುಂಬಗಳು | ೨೫ | ೨೫ |

ಈ ಮೇಲೆ ಇರುವ ಚಿತ್ರಣವನ್ನು ನೋಡಿದರೆ ಹೆಳವರ ಆರ್ಥಿಕ ಸ್ಥಿತಿ ಹೇಗಿದೆ ಎಂಬುವುದು ಸ್ಪಷ್ಟವಾಗುತ್ತದೆ. ಅಧ್ಯಯನಕ್ಕಾಗಿ ಆಯ್ಕೆಮಾಡಿದ ಎರಡು ಗ್ರಾಮಗಳಲ್ಲಿ ತಲಾ ೨೫ ಕುಟುಂಬಗಳಿಗೆ ಬೇಟಿನಿಡಿದಾಗ ಮುಕ್ಕಾಲು ಕುಟುಂಬಗಳು ಇಂದಿಗು ತಮ್ಮ ಆದಾಯದ ಮಿತಿಯನ್ನು ೫ ಸಾವಿರದ ಅಂಚಿಗೆ ತಲುಪದಿರುವುದು ಕಂಡುಬಂದಿತು. ಇವರಲ್ಲಿ ಕೆಲವರು ಪಾರಂಪರಿಕ ವೃತ್ತಿಯನ್ನು ಮಾತ್ರ ನಿರ್ವಹಿಸುತ್ತಿದ್ದರು. ಅದರಲ್ಲಿ ಕೆಲವರು ಪಾರಂಪರಿಕ ವೃತ್ತಿ ಜೊತೆಗೆ ಕೂಲಿ ಸಿಕ್ಕರೆ ಅದನ್ನು ಸಹ ಮಾಡುತ್ತಿರುವುದು ಕಂಡುಬರುತ್ತದೆ. ಇವರಲ್ಲಿ ಸ್ವಲ್ಪ ಜನ ಪಾರಂಪರಿಕ ವೃತ್ತಿ ಜೊತೆಗೆ ಕೃಷಿಯನ್ನು ಮಾಡುತ್ತಿರುವುದು ನೋಡಬಹುದು.



**ಪಾರಂಪರಿಕ ವೃತ್ತಿಯವರ ಭೂ ಹಿಡುವಳಿ ಚಿತ್ರಣ**

| ಕ್ರ.ಸಂ. | ಗ್ರಾಮ | ಆಯ್ಕೆ ಮಾಡಿದ ಕುಟುಂಬಗಳು | ಹೊಂದಿರುವಕೃಷಿಭೂಮಿ(ಎಕರೆಗಳಲ್ಲಿ) | | | |
|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಭೂರಹಿತರು |
| ೧ | ಮಂಟೂರು | ೨೫ | ೧೨ | ೩೪೧/೨ | ೪೬.೧/೨ | ೦೪ |
| ೨ | ಜೋಕಾನಟ್ಟಿ | ೨೫ | ೦೪ | ೩೩ | ೩೭ | ೦೫ |
| | ಒಟ್ಟು | ೫೦ | ೧೬ | ೬೭.೧/೨ | ೮೩.೧/೨ | ೦೯ |

ಅಧ್ಯಯನಕ್ಕೆ ಆಯ್ಕೆ ಮಾಡಿದ ೫೦ ಕುಟುಂಬಗಳಲ್ಲಿ ೪೧ ಕುಟುಂಬಗಳು ಮಾತ್ರ ಭೂಮಿಯನ್ನು ಹೊಂದಿರುವುದು ಕಂಡುಬರುತ್ತದೆ. ಅದರಲ್ಲಿ ೯ ಕುಟುಂಬಗಳು ಭೂ ರಹಿತವಾಗಿವೆ. ಸರಾಸರಿ ೫೦ ಕುಟುಂಬಗಳು ೧.೬೭ ಎಕರೆಯಷ್ಟು ಭೂಮಿಯನ್ನು ಮಾತ್ರ ಹೊಂದಿರುವುದು ಕಂಡುಬರುತ್ತದೆ. ಇದರಲ್ಲಿ ೧೬ ಎಕರೆಯಷ್ಟು ಒಣಭೂಮಿ ಮತ್ತು ೬೭.೧/೨ ಎಕರೆಯಷ್ಟು ಭೂಮಿಯಲ್ಲಿ ಬಾವಿಗಳಿಂದ ಮತ್ತು ಚಾನಲ್‌ಗಳಿಂದ ನೀರು ಪಡೆಯುತ್ತಿದ್ದಾರೆ.

ಈ ಮೇಲಿನ ಕೋಷ್ಟಕದ ಅನ್ವಯದಂತೆ ೫೦ ಪಾರಂಪರಿಕ ವೃತ್ತಿ ಕುಟುಂಬಗಳು ಸರಾಸರಿ ೧.೬೭ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದು ಅದರಲ್ಲಿ ಬರುವ ಆದಾಯದಿಂದ ವರ್ಷವಿಡಿ ಕುಟುಂಬದ ಎಲ್ಲ ಸದಸ್ಯರು ಬದುಕಲು ಸಾದ್ಯವಿಲ್ಲ. ಹೀಗಾಗಿ ೫೦ ಪಾರಂಪರಿಕ ವೃತ್ತಿಯ ಕುಟುಂಬಗಳಲ್ಲಿ ೦೭ ಕುಟುಂಬದವರು ಕೃಷಿ ಜೊತೆಗೆ ಪಾರಂಪರಿಕ ವೃತ್ತಿಯಲ್ಲಿ ತೊಡಗಿದ್ದಾರೆ. ಉಳಿದ ೪೩ ಕುಟುಂಬಗಳು ಅನಿವಾರ್ಯವಾಗಿ ಪಾರಂಪರಿಕ ವೃತ್ತಿ ಜೊತೆಗೆ ಕೂಲಿ ಸಿಕ್ಕರೆ ಅದನ್ನು ಕೂಡ ಮಾಡುತ್ತಿದ್ದಾರೆ. ತಮ್ಮ ಅಲ್ಪ ಸ್ವಲ್ಪ ಭೂಮಿಯಲ್ಲಿ ಎಲ್ಲರು ಜೀವನ ಸಾಗಿಸಲು ಅಸಾಧ್ಯವಾದ ಕಾರಣ ತಮ್ಮ ಭೂಮಿಯನ್ನು ಭೂ ಹಿಡುವಳಿದಾರರಿಗೆ ಒಪ್ಪಿಸಿ ತಾವು ಪಾರಂಪರಿಕ ವೃತ್ತಿಗೆ ಶರಣು ಹೋಗಿದ್ದಾರೆ. ಇವರಿಗೆ ನಿಶ್ಚಿತ ದುಡಿಮೆ ಮತ್ತು ಆದಾಯಗಳಿಲ್ಲದ ಕಾರಣ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗಿಂತ ಅಲೆಮಾರಿ ಹೆಳವರು ಆರ್ಥಿಕವಾಗಿ ಹಿಂದುಳಿದಿದ್ದಾರೆ.

ಅಲೆಮಾರಿ ಹೆಳವರು ಇವತ್ತು ಅವರಿರುವ ಸ್ಥಿತಿಯಲ್ಲಿ ಆಧುನಿಕ ಜಗತ್ತಿನ ಯಾವ ಸವಲತ್ತುಗಳನ್ನು ಪಡೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ಒಂದು ಅರ್ಥದಲ್ಲಿ ಅಲೆಮಾರಿ ಹೆಳವರು ತಮ್ಮ ಪಾರಂಪರಿಕ ವೃತ್ತಿಗೆ ತೀವ್ರವಾಗಿ ನಿಷ್ಠರಾಗಿದ್ದಾರೆ. ತಮ್ಮ ವೃತ್ತಿಯ ಬಗ್ಗೆ ತುಂಬಾ ಭಾವುಕರಾಗಿದ್ದಾರೆ. ತಮ್ಮ ವೃತ್ತಿಯಿಂದ ಜೀವನ ನಿರ್ವಹಿಸುವುದು ಕಷ್ಟವೆಂದು ಗೊತ್ತಿದ್ದರು ಬಿಡಲೊಪ್ಪುತ್ತಿಲ್ಲ. ಪಾರಂಪರಿಕ ವೃತ್ತಿಯವರಲ್ಲಿ ಕೆಲವರು ಆರ್ಥಿಕವಾಗಿ ಉತ್ತಮವಾಗಿದ್ದಾರೆ. ಅವರಿಗೆ ನಿಮ್ಮ ಆದಾಯದಲ್ಲಿ ಜೀವನ ಸಾಗಿಸಲು ತೊಂದರೆ ಇಲ್ಲವಲ್ಲ ಯಾಕೆ ಊರೂರು ಅಲೆಯುತ್ತೀರಾ? ಎಂದು ಪ್ರಶ್ನಿಸಿದರೆ ಅವರು ಹೇಳುವುದು ಹೀಗೆ "ಅದು ನಮ್ಮ ವಂಶಸ್ಥರ ವೃತ್ತಿ ಐಶ್ವರ್ಯ ಬಂದಿತೆಂದು ಊಟದ ತಟ್ಟೆಯನ್ನು ಕಾಲಲ್ಲಿ ಒದೆಯಲಾಗುತ್ತದೆಯೇ?"ಎಂದು ಮುಗ್ಧವಾಗಿ ನಮ್ಮನ್ನೆ ಪ್ರಶ್ನಿಸುತ್ತಾರೆ. ಪಾಪ... ಮೆಲ್ವರ್ಗದ ಜನ ತಮ್ಮ ಮನರಂಜನೆಗಾಗಿ, ಸ್ವಾರ್ಥಕ್ಕಾಗಿ ಬಳಸಿಕೊಂಡು ಈಗ ಇವರ ಅವಶ್ಯಕತೆ ಇಲ್ಲವೆಂದು ಬಿಸಾಡಿದ್ದಾರೆಂಬ ಅರಿವು ಇಲ್ಲದ ಅಮಾಯಕ ಹೆಳವರು.

ಅಡಿಟ್ಟಿಪಣಿ

೧. ಶಂಕರರಾವ್ ಚ.ನ., ಭಾರತೀಯ ಸಮಾಜ., ಜೈಭಾರತ ಪ್ರಕಾಶನ, ಮಂಗಳೂರು, ೨೦೦೦, ಪು. ೨೮೧

೨. ಶಂಕರರಾವ್ ಚ.ನ., ಭಾರತೀಯ ಸಾಮಾಜಿಕ ಸಂಸ್ಥೆಗಳು" ನಂಜಮ್ಮಣ್ಣಿ ಎಂ., ಉಲ್ಲೇಖ: ಭಾರತೀಯ ಸಮಾಜ., ಜೈಭಾರತ ಪ್ರಕಾಶನ, ಮಂಗಳೂರು, ೨೦೦೦, ಪು.೨೮೩

೩. ಎ.ಎಸ್. ಪ್ರಭಾಕರ್‌ರವರು ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಸಲ್ಲಿಸಿದ 'ಹೆಳವರು' ವರದಿ, ೨೦೦೩, ಪು. ೪೩

೪. ಡಾ. ಸ.ಚಿ. ರಮೇಶ (ಸಂ), ಅಲೆಮಾರಿಗಳ ಸ್ಥಿತಿಗತಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು. ೮೯-೧೧೪

೫. ಎ.ಎಸ್. ಪ್ರಭಾಕರ್‌ರವರು ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ ಸಲ್ಲಿಸಿದ 'ಹೆಳವರು' ವರದಿ, ೨೦೦೩, ಪು. ೮೭

## ಅಧ್ಯಾಯ – ೪

# ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರು

* ಪಾರಂಪರಿಕ ವೃತ್ತಿಯನ್ನು ತೊರೆಯುವುದರ ಹಿಂದಿನ ಕಾರಣಗಳು
* ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು

# ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರು

**ಭಾ**ರತದ ಶ್ರೇಣಿಕೃತ ವ್ಯವಸ್ಥೆಯಲ್ಲಿ ಅಲೆಮಾರಿಗಳು ಸಹಜವಾಗಿಯೇ ಕೆಳಜಾತಿಯ ಸ್ಥಾನಮಾನ ಪಡೆದಿರುವುದು. ನಮಗೆಲ್ಲಾ ಗೊತ್ತಿರುವ ಸಂಗತಿಯೇ ಆಗಿದೆ. ಆದರೆ ನೆಲೆ ನಿಂತು ನಿಶ್ಚಿತ ಆದಾಯದ ಮೂಲಗಳನ್ನು ಕಂಡು ಕೊಂಡಿರುವ ಕೆಳಜಾತಿಗಳಿಗೂ, ಅಲೆಮಾರಿಗಳಿಗೂ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಾಕಷ್ಟು ಭಿನ್ನತೆಗಳು ಇಂದಿಗೂ ಉಳಿದುಕೊಂಡು ಬಂದಿವೆ. ನಾವು ಅಲೆಮಾರಿಗಳ ಮೂಲವನ್ನು ಹುಡುಕುತ್ತಾ ಹೋದರೆ ನಮಗೆ ಸಿಗುವುದು ಅವರ ಹುಟ್ಟಿನ ಕುರಿತಾದ ಸೃಷ್ಟಿ ಪುರಾಣಗಳು, ನಾವು ಈ ಸೃಷ್ಟಿ ಪುರಾಣಗಳನ್ನು ಗಮನಿಸುತ್ತಾ ಹೋದರೆ ಪ್ರತಿಯೊಂದು ಅಲೆಮಾರಿ ಸಮುದಾಯದ ಹುಟ್ಟು ಯಾವುದೇ ಪೌರಾಣಿಕ ವ್ಯಕ್ತಿಯ ಶಾಪದಿಂದ ಸಂಭವಿಸಿರುತ್ತದೆ. ಇಲ್ಲವೇ ಅವನು ಹುಟ್ಟುವಾಗಲೇ ಅಂಗವಿಕಲನಾಗಿರುವುದು ಕಂಡು ಬರುತ್ತದೆ. ಹೆಳವರು ಇದಕ್ಕೆ ಹೊರತಾಗಿಲ್ಲ. ಬಹುತೇಕ ಸೃಷ್ಟಿ ಪುರಾಣಗಳಲ್ಲಿ ಇವರ ಮೂಲ ಪುರುಷ ಕುಂಟನಾಗಿದ್ದನೆಂಬುದನ್ನು ತಿಳಿಸುತ್ತದೆ.

ಬಹುತೇಕ ಅಲೆಮಾರಿಗಳು ತಮ್ಮ ಹುಟ್ಟಿನ ಕುರಿತಾಗಿ ಕೆಟ್ಟದಾದ ಸೃಷ್ಟಿ ಪುರಾಣಗಳನ್ನು ಸೃಷ್ಟಿಸಿಕೊಂಡಿರುವುದನ್ನು ಕಾಣುತ್ತೇವೆ. ಕಾರಣ ಈ ದೇಶದ ಚರಿತ್ರೆಯಲ್ಲಿ ಆಳುವವರಿಂದ ಈ ಅಲೆಮಾರಿಗಳು ತಮ್ಮ ಆರ್ಥಿಕ ಮೂಲಗಳನ್ನು ಕಳೆದುಕೊಳ್ಳುತ್ತಾ ಬಂದಿದ್ದಾರೆ. ನಿಶ್ಚಿತ ಆರ್ಥಿಕ ಮೂಲವನ್ನು ಕಳೆದುಕೊಂಡವನು ಪುರಾಣಗಳಲ್ಲಿ ಸಾಂಕೇತಿಕವಾಗಿ ಅಂಗವಿಕಲ ನಾಗುತ್ತಾನೆ. ಆರ್ಥಿಕವಾಗಿ ಪರಾವಲಂಬಿಯಾಗುತ್ತಾನೆ. ಪ್ರತಿಭಟನೆಯು ಸಾಧ್ಯವಾಗದೆ ಆತ್ಮ ದ್ವೇಷದಲ್ಲಿ ನಲುಗುತ್ತಲೇ ಬದುಕುತ್ತಾನೆ. ಕರ್ಮ ಸಿದ್ಧಾಂತವನ್ನು ಗಾಢವಾಗಿ ಪ್ರತಿಪಾದಿಸುವ ಭಾರತದಲ್ಲಿ ಪೂರ್ವಜನ್ಮದ ಶಾಪದಿಂದ ಈ ಜನ್ಮದಲ್ಲಿ ನಿರ್ಗತಿಕನಂತೆ ಬದುಕಬೇಕಾದ ಸ್ಥಿತಿ ಯನ್ನು ಅನುಭವಿಸುತ್ತಾ ಆತ್ಮ ಮರುಕದಲ್ಲಿಯೇ ಬದುಕನ್ನು ಸಾಗಿಸುತ್ತಾನೆ.

ಸಮಾಜವು ನಿತ್ಯ ಪರಿವರ್ತನ ಶೀಲವಾದುದು. ಅದು ಒಂದು ಜೀವಂತ ವ್ಯವಸ್ಥೆ. ಅದು ನಿಂತ ನೀರಿನಂತಿರದೆ ಹರಿಯುತ್ತಿರುವ ಪ್ರವಾಹದಂತಿರುತ್ತದೆ. ಇದಕ್ಕೆ ಕಾರಣ ಮಾನವನ ಅಗಾಧ ಬುದ್ಧಿಶಕ್ತಿ. ರಚನಾತ್ಮಕ ಶಕ್ತಿ ಹಾಗೂ ಹೊರಗಿನ ಸಮಾಜಗಳ ಪ್ರಭಾವ. ಸಮಾಜದ ಒಂದು ಕ್ಷೇತ್ರದಲ್ಲಾಗುವ ಪರಿವರ್ತನೆಗಳು ಇತರ ಕ್ಷೇತ್ರಗಳ ಮೇಲೂ ಪ್ರಭಾವ ಬೀರುತ್ತವೆ. ಪ್ರಾಚೀನ ಸಮಾಜಗಳು ತೀರ ಸರಳವಾಗಿದ್ದವು. ಆಗ ಪರಿವರ್ತನೆಗೆ ಅವಕಾಶಗಳು ಕಡಿಮೆ ಇದ್ದವು ಕಾಲಾನುಕ್ರಮದಲ್ಲಿ ಅದರಲ್ಲಿಯೂ ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳ ಬೆಳವಣಿಗೆಯಿಂದಾಗಿ ಆಧುನಿಕ ಸಮಾಜದಲ್ಲಿ ತೀವ್ರತರ ಪರಿವರ್ತನೆಗಳಾಗುತ್ತಿವೆ. ಇಂದು ಜೀವನದ ಎಲ್ಲಾ ಕ್ಷೇತ್ರ ಗಳಲ್ಲಿಯೂ ಪರವರ್ತನೆಗಳಾಗುತ್ತಿವೆ.

ಆಧುನಿಕತೆಯ ಗಾಳಿ ಇಂದು ಹೆಳವರ ಮೇಲೆ ತೀವ್ರತರವಾದ ಪ್ರಭಾವ ಬೀರಿದೆ. ಇತರ ಸಮುದಾಯಗಳಂತೆ ಹೆಳವರು ಪರಿವರ್ತನೆಗೊಳ್ಳುತ್ತಿದ್ದಾರೆ. ಸಮಕಾಲೀನ ಸಮಾಜದ ಆಚಾರ, ವಿಚಾರ ಸಂಪ್ರದಾಯಗಳಿಂದ ಇಂದಿನ ಯುವ ಪೀಳಿಗೆಯವರು ಸಾಕಷ್ಟು ಪ್ರಭಾವಿತರಾಗುತ್ತಿದ್ದಾರೆ. ಇವರಲ್ಲಿ ಒಂದು ಗುಂಪು ಪಾರಂಪರಿಕ ವೃತ್ತಿಯು ದೇವರು ಕೊಟ್ಟ ವರ ಎಂತಹ ಕ್ಲಿಷ್ಟ ಸ್ಥಿತಿ ಇದ್ದರೂ ಸಹ ಆ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗಬೇಕೆಂದು ಬಯಸಿದರೇ, ಇನ್ನೊಂದು ಗುಂಪು ಪಾರಂಪರಿಕ ವೃತ್ತಿ ಬಗ್ಗೆ ಗೌರವ ಹೊಂದಿದ್ದರೂ ಸಹ ತಾವು ಅವಲಂಬಿಸಿದ್ದ ರೈತರೇ ಅತಂತ್ರ ಸ್ಥಿತಿಯಲ್ಲಿರುವುದರಿಂದ ಅನಿವಾರ್ಯವಾಗಿ ಬೇರೆ ವೃತ್ತಿಗಳತ್ತ ಒಲವು ತೋರುತ್ತಿದ್ದಾರೆ.

**ಪಾರಂಪರಿಕ ವೃತ್ತಿಯನ್ನು ತೊರೆಯುವುದರ ಹಿಂದಿನ ಕಾರಣಗಳು**

ಅಲೆಮಾರಿಗಳಾಗಿ ಊರೂರು ಅಲೆಯುತ್ತ ತಮ್ಮ ಕಸುಬುಗಳನ್ನು ಮಾಡಿ ಹೊಟ್ಟೆ ಹೊರೆಯುವ ಹತ್ತು ಹಲವು ಸಮುದಾಯಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಅಂತಹ ಸಮುದಾಯಗಳಲ್ಲಿ ಹೆಳವರದೂ ಒಂದು ವಿಶಿಷ್ಟ ಸಮೂಹ

ಕುಲವೆಂದು ಕುಲವಯ್ಯ
ನಿನ್ನ ಕುಲವನ್ನು ಹೊಗಳೇನು
ಹಾಲು ಸಾಗರವಾಗಲಿ ಬೆಣ್ಣೆ ಬೆಟ್ಟವಾಗಲಿ
ಗಂಡು ಮಕ್ಕಳು ಘನವಂತರಾಗಲಿ
ಒಂದು ಮನೆಗೆ ಎರಡು ಮನೆ ಆಗಲಿ

ಹೀಗೆ ಬಗೆ, ಬಗೆಯಾಗಿ ಕುಲ ಕೊಂಡಾಡುವ, ಸತ್ತು ಕೆಟ್ಟೋರನ್ನು ಹೊಗಳುವ, ವಂಶದ ವೃತ್ತಾಂತ ಹೇಳುವ, ಹರಕೆ ನುಡಿಯುವ ಹೆಳವರು ವರ್ಷಕ್ಕೊಂದು ಬಾರಿ ಮನೆಗೆ ಬಂದರೆ ಸಾಕು. ಆ ಮನೆಯಲ್ಲಿ ಸಂಭ್ರಮದ ವಾತಾವರಣ. ಮನೆ ಮಂದಿಯೆಲ್ಲಾ ಬಂದು ಕುಳಿತು

ತಮ್ಮ ಮನೆಯ ಕುಲ ವೃತ್ತಾಂತವನ್ನು ಕೇಳಿ ಹೆಳವನಿಗೆ ಖುಷಿಯಾಗುವಷ್ಟು ದವಸ-ಧಾನ್ಯಗಳನ್ನು ನೀಡಿ ಕಳುಹಿಸುವ ಕಾಲವೊಂದಿತ್ತು.

ಇಂದು ಸಮಾಜ ಸಾಕಷ್ಟು ಬದಲಾಗಿದೆ. ಹೆಳವ ಮನೆಗೆ ಬಂದನೆಂದರೆ ಕಾಟಾಚಾರಕ್ಕೆ ಅಲ್ಪ ಸ್ವಲ್ಪ ಕೊಟ್ಟು ಸಾಗ ಹಾಕುತ್ತಾರೆ. ಕಾರಣ ಇಂದು ಬೆಲೆಗಳು ದಿನದಿಂದ ದಿನಕ್ಕೆ ಗಗನಕ್ಕೆ ಏರುತ್ತಿವೆ. ರೈತ ಇಂದು ಸಾಕಷ್ಟು ಅತಂತ್ರ ಸ್ಥಿತಿಯಲ್ಲಿದ್ದಾನೆ. ಮಾಡಿದ ಸಾಲ ತೀರಿಸಲಾಗದೇ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ರೈತನ ಸ್ಥಿತಿಯೇ ಹೀಗಿರುವಾಗ ಅವನನ್ನೇ ನಂಬಿಕೊಂಡಿರುವ ಹೆಳವರ ಪಾಡೇನು?

ಪಾರಂಪರಿಕ ವೃತ್ತಿಯನ್ನು ತೊರೆಯುವುದರ ಹಿಂದಿನ ಕಾರಣಗಳನ್ನು ಹೀಗೆ ಗುರುತಿಸಬಹುದು.

- ✓ ಜನನ ಮತ್ತು ಮರಣದ ಕುರಿತು ದಾಖಲಾತಿಯನ್ನು ಸರ್ಕಾರ ಮಾಡುತ್ತಿರುವುದು ಹೆಳವರು ಮಾಡುತ್ತಾ ಬಂದಿರುವ ಮನೆತನಗಳ ಜನನ, ಮರಣಗಳ ಕುರಿತಾದ ದಾಖಲಾತಿಯ ಕಾರ್ಯವನ್ನು ಇಂದು ಸರ್ಕಾರದ ಒಂದು ಶಾಖೆಯು ನಿರ್ವಹಿಸುತ್ತಿರುವುದರಿಂದ ಇವರ ವಂಶಾವಳಿ ಹೇಳುವ ವೃತ್ತಿ ಇಂದು ಅಷ್ಟು ಪ್ರಮುಖವೆನಿಸುತ್ತಿಲ್ಲ.
- ✓ ಪಾರಂಪರಿಕ ವೃತ್ತಿಯಿಂದ ಹೊಟ್ಟೆ ಹೊರೆಯುವುದು ಕಷ್ಟವಾದುದು. ಒಕ್ಕಲು ಮನೆಯವರು ನೀಡುವ ಧವಸ, ದಾನ್ಯದಿಂದಲೇ ವರ್ಷವಿಡೀ ಜೀವನ ನಡೆಸಬೇಕಾಗಿದ್ದರಿಂದ ಹೊಟ್ಟೆ ಹೊರೆಯುವುದು ಕಷ್ಟವಾಗಿ ಇತರ ವೃತ್ತಿಗಳತ್ತ ಮುಖ ಮಾಡಿದರು.
- ✓ ಇವರ ವೃತ್ತಿ ಅನುತ್ಪಾದಕವಾದುದು, ಇಂದು ಕೂಲಿ ಮಾಡುವವನಿಗೂ ಒಂದು ನಿಗದಿತ ವೇತನವೆಂಬುದು ಇರುತ್ತದೆ. ಆದರೆ ಹೆಳವರ ಪಾರಂಪರಿಕ ವೃತ್ತಿಗೆ ನಿರ್ದಿಷ್ಟ ಬೆಲೆ ಇಲ್ಲ. ಕಾರಣ ಇವರ ವೃತ್ತಿ ಆರ್ಥಿಕವಾಗಿ ಅನುತ್ಪಾದಕವಾದುದು. ಹೀಗಾಗಿ ಅವರು ಕೊಟ್ಟಷ್ಟನ್ನು ಮಾತ್ರ ಪಡೆಯಬೇಕಾಗಿತ್ತು. ಈ ಅಂಶವು ಕೂಡ ಪಾರಂಪರಿಕ ವೃತ್ತಿ ತೊರೆಯುವಿಕೆಗೆ ಕಾರಣವಾಯಿತು.
- ✓ ಆಳುವ ವರ್ಗ ಇವರನ್ನು ಅತಿಯಾಗಿ ಶೋಷಣೆ ಮಾಡಿದ್ದು, ನಾವು ಜಗತ್ತಿನಲ್ಲಿ ಉಳ್ಳವರು ಮತ್ತು ಇಲ್ಲದವರು ಎಂಬ ೨ ವರ್ಗಗಳನ್ನು ಕಾಣುತ್ತೇವೆ. ಇಲ್ಲಿ ಸಂಪತ್ತನ್ನು ಹೊಂದಿರುವ ವರ್ಗ ಅದನ್ನು ತನ್ನಲ್ಲೇ ಉಳಿಸಿಕೊಳ್ಳುವುದಕ್ಕಾಗಿ ಇತರ ಕೆಳ ಸಮುದಾಯಗಳು ಮೇಲೆ ಬರದಂತೆ ತಂತ್ರಗಳನ್ನು ಹೆಣೆಯುತ್ತಾ ತನ್ನನ್ನು ಅವಲಂಬಿಸಿಯೇ ಬದುಕುವಂತೆ ನೋಡಿಕೊಳ್ಳುತ್ತಿತ್ತು. ಇದನ್ನು ಅರಿತ ಸಮುದಾಯಗಳು ಪಾರಂಪರಿಕ ವೃತ್ತಿಯಿಂದ ಹೊರಬಂದು ಆರ್ಥಿಕ ಉತ್ಪಾದನೆಗೆ ಅನುಕೂಲಕರವಾದ ವೃತ್ತಿಯಲ್ಲಿ ತೊಡಗಿದುದು ಸಹ ಕಾರಣವಾಯಿತು.

- ✓ ಕೈಗಾರೀಕರಣ ಮತ್ತು ನಗರೀಕರಣದ ಪ್ರಭಾವ., ಕೈಗಾರೀಕರಣ ಮತ್ತು ನಗರೀಕರಣದ ಪ್ರಭಾವದಿಂದಾಗಿ ಹೊಸ ಉದ್ಯೋಗಗಳು ಸೃಷ್ಠಿಯಾದವು. ಆ ಉದ್ಯೋಗಗಳು ಹೆಚ್ಚು ಗೌರವಯುತವು ಮತ್ತು ಲಾಭದಾಯಕವೂ ಆಗಿದ್ದರಿಂದ ಪಾರಂಪರಿಕ ವೃತ್ತಿಯಲ್ಲಿ ಆಸಕ್ತಿ ಕಡಿಮೆಯಾಯಿತು.

- ✓ ತಮ್ಮ ವೃತ್ತಿಯ ಬಗ್ಗೆಯೇ ಕೀಳು ಅಭಿಪ್ರಾಯ (ಮನೋಭಾವನೆ) ಮೂಡಿದುದು. ಹೆಳವರು ೫-೬ನೇ ಶತಮಾನದಿಂದಲೂ ಪಾರಂಪರಿಕ ವೃತ್ತಿಯನ್ನು ನಿರ್ವಹಿಸುತ್ತಿದ್ದರೂ ಅವರ ಆರ್ಥಿಕತೆಯಲ್ಲಿ, ಸಾಮಾಜಿಕತೆಯಲ್ಲಿ ಯಾವುದೇ ಬದಲಾವಣೆ ಕಂಡು ಬರದ ಕಾರಣ ಬೇರೆ ವೃತ್ತಿಗಳನ್ನು ಅರಿಸತೊಡಗಿದರು.

- ✓ ಯುವ ಪೀಳಗೆ ಪಾರಂಪರಿಕ ವೃತ್ತಿ ಬಗ್ಗೆ ಅಷ್ಟಾಗಿ ಆಸಕ್ತಿ ತೋರಿಸದುದು. ಯುವ ಪೀಳಗೆ ಜನ ತಮ್ಮ ಹಿರಿಯರೊಂದಿಗೆ ಒಕ್ಕಲು ಮನೆಗಳಿಗೆ ಹೋದಾಗ ಅನುಭವಿಸಿದ ಸಾಮಾಜಿಕ ಅವಮಾನಗಳನ್ನು ಮೆಲುಕು ಹಾಕುತ್ತಾ ಸ್ವಾಭಿಮಾನದಿಂದ ಬದುಕಬೇಕೆಂಬ ಛಲ ಹೊಂದುತ್ತಿರುವುದು ಕೂಡ ಪಾರಂಪರಿಕ ವೃತ್ತಿ ಬಗ್ಗೆ ಅಷ್ಟಾಗಿ ಆಸಕ್ತಿ ತೋರಿಸದಿರಲು ಕಾರಣವಾಗಿದೆ.

- ✓ ವೃತ್ತಿಯನ್ನು ತೊರೆದ ತಮ್ಮವರೇ ಕೀಳಾಗಿ ಕಂಡುದುದು ಮತ್ತು ತಿಳುವಳಿಕೆ ಮೂಡಿಸಲು ಪ್ರಯತ್ನಿಸಿದ್ದು., ಹೆಳವರಲ್ಲಿಯೇ ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತೊಡಗಿ, ಆರ್ಥಿಕವಾಗಿ ಸ್ಥಿತಿವಂತರಾದ ಜನ ಇವರನ್ನು ಕೀಳಾಗಿ ಕಂಡದ್ದು ಮತ್ತು ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತೊಡಗುವಂತೆ ತಿಳುವಳಿಕೆ ಮೂಡಿಸಿದ್ದು ಸಹ ಕಾರಣವಾಯಿತು.

- ✓ ಸಮುದಾಯದ ಕೆಲವರು ಅಲ್ಪಸ್ವಲ್ಪ ಶಿಕ್ಷಣ ಪಡೆದು ಬೇರೆ ವೃತ್ತಿಗಳತ್ತ ಮುಖ ಮಾಡಿದುದು., ಹೆಳವರಲ್ಲಿ ಕೆಲವರು ಪಾರಂಪರಿಕ ವೃತ್ತಿಯನ್ನು ತೊರೆದು ಅಲ್ಪಸ್ವಲ್ಪ ಶಿಕ್ಷಣ ಪಡೆದು ಸರ್ಕಾರಿ, ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ ಪಡೆದು ಉತ್ತಮ ಜೀವನ ಸಾಗಿಸುತ್ತಿರುವುದು ಕಂಡು ತಾವು ಸಹ ಅದೇ ರೀತಿಯಾಗಬೇಕೆಂದು ಪಾರಂಪರಿಕ ವೃತ್ತಿಯಲ್ಲಿ ನಿರಾಸಕ್ತಿ ತಾಳದ್ದೂ ಕೂಡ ಕಾರಣವಾಯಿತು.

- ✓ ಸರ್ಕಾರದ ಯೋಜನೆ ಮತ್ತು ಸೌಲಭ್ಯಗಳ ಪರಿಣಾಮ. ಅಲೆಮಾರಿ ಸಮುದಾಯಗಳಿಗಾಗಿಯೇ ಸರ್ಕಾರ ಸಾಕಷ್ಟು ಯೋಜನೆಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಅವರನ್ನು ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಮೇಲೆ ತರಲು ಪ್ರಯತ್ನಿಸುತ್ತಿರುವುದು ಕೂಡ ಪಾರಂಪರಿಕ ವೃತ್ತಿಯನ್ನು ತೊರೆಯುವಿಕೆಗೆ ಕಾರಣವಾಗುತ್ತಿದೆ.

ಹೀಗೆ ಮೇಲಿನ ಹಲವಾರು ಕಾರಣಗಳಿಂದಾಗಿ ಪಾರಂಪರಿಕ ವೃತ್ತಿಯನ್ನು ತೊರೆಯುತ್ತಿದ್ದಾರೆ. ಇದು ಕೇವಲ ಹೆಳವ ಸಮುದಾಯದಲ್ಲಿ ಅಷ್ಟೇ ಕಂಡು ಬರುತ್ತಿಲ್ಲ. ಪಾರಂಪರಿಕ ವೃತ್ತಿಯನ್ನು ಅನುಸರಿಸುತ್ತಿರುವ ಎಲ್ಲಾ ಸಮುದಾಯಗಳ ಸ್ಥಿತಿಯು ಇದೇ ಆಗಿದೆ. ಉದಾಹರಣೆಗೆ ಹಕ್ಕಿಪಿಕ್ಕಿಯರು, ಹಗಲು ವೇಷಗಾರರು, ಡೊಂಬರು, ಹೆಳವರು ಮುಂತಾದವರು, ಆಳುವ ವರ್ಗದವರು ಮತ್ತು ಮೇಲ್ ವರ್ಗದವರ ಕಪಿಮುಷ್ಠಿಯಲ್ಲಿ ಸಿಲುಕಿ ಸಾಮಾಜಿಕವಾಗಿ, ಆರ್ಥಿಕವಾಗಿ ಸಾಕಷ್ಟು ಸಮಸ್ಯೆಗಳಿಂದ ಬಳಲಿದ್ದಾರೆ. ಆದರೆ ಆಧುನಿಕತೆಯ ಗಾಳಿ ಇವರಲ್ಲೂ ಬೀಸಿರುವುದರಿಂದ ಸಮುದಾಯದ ಎಲ್ಲರೂ ಅಲ್ಲದಿದ್ದರೂ ಅಲ್ಪಸ್ವಲ್ಪ ಜನರಾದರೂ ಸಹ ಪಾರಂಪರಿಕ ವೃತ್ತಿಯನ್ನು ತೊರೆದು ಇತರ ವೃತ್ತಿಗಳಲ್ಲಿ ತಮ್ಮ ಬದುಕನ್ನು ಕಂಡುಕೊಳ್ಳಲು ಯತ್ನಿಸುತ್ತಿದ್ದಾರೆ.

**ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು**

ಸಾಮಾಜಿಕ ಸ್ತರವಿನ್ಯಾಸದ ಒಂದು ರೂಪವಾಗಿರುವ ಜಾತಿ ಪದ್ಧತಿಯು ತನ್ನೆಲ್ಲಾ ವೈಶಿಷ್ಟ್ಯಗಳೊಂದಿಗೆ ಭಾರತಕ್ಕೆ ಮಾತ್ರ ಸೀಮಿತವಾಗಿದೆ ಎನ್ನಬಹುದು. ತನ್ನ ಹುಟ್ಟು ಮತ್ತು ಬೆಳವಣಿಗೆಯ ದೃಷ್ಟಿಯಿಂದ ಸಂಪೂರ್ಣವಾಗಿ ದೇಶಿಯವೆನಿಸಿರುವ ಜಾತಿಯು ಭಾರತದ ಸಾಮಾಜಿಕ ಜೀವನದ ಅವಿಭಾಜ್ಯ ಅಂಗವಾಗಿದೆ. ಜಾತಿಗೆ ಸರಿಸಮಾನವಾದ ಪದ್ಧತಿಯು ಜಗತ್ತಿನ ಬೇರಾವ ದೇಶಗಳಲ್ಲಿಯೂ ಕಂಡುಬರುವುದಿಲ್ಲ. ಭಾರತದಲ್ಲಿನ ಸಮುದಾಯಗಳು ತಮ್ಮ ಜಾತಿಗೆ ಅನುಗುಣವಾಗಿ ವೃತ್ತಿಗಳನ್ನು ನಿರ್ವಹಿಸಬೇಕಾಗಿರುವುದರಿಂದ ಇಲ್ಲಿ ವೃತ್ತಿ ಆಯ್ಕೆಗೆ ಅವಕಾಶವಿಲ್ಲ. ಏಕೆಂದರೆ ಗೌರವಯುತ ಮತ್ತು ಲಾಭದಾಯಕ ವೃತ್ತಿಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಅದರ ಸಕಲ ಸೌಲಭ್ಯಗಳನ್ನು ಪಡೆಯಲು ಆಳುವ ವರ್ಗಗಳು ವೃತ್ತಿಯ ಆಯ್ಕೆಗೆ ಸಂಬಂಧಿಸಿದಂತೆ ನಿರ್ಬಂಧಗಳನ್ನು ಹೇರುತ್ತಲೇ ಬಂದಿವೆ. ಕೆಳವರ್ಗಗಳು ಸಹ ಅದನ್ನು ಚಾಚು ತಪ್ಪದೆ ಪಾಲಿಸುತ್ತಾ ಬಂದಿವೆ. ಅಲ್ಲದೆ ಮೆಲ್ವರ್ಗದವರನ್ನು ಅವಲಂಬಿಸಿ ಬದುಕು ಸಾಗಿಸುವುದು ಅನಿವಾರ್ಯವೆಂಬ ಸ್ಥಿತಿ ಅವರನ್ನು ಅವಲಂಬಿಸಿದ ಸಮುದಾಯಗಳಿಗೆ ಸೃಷ್ಟಿಸಿದ್ದಾರೆ. ಹೀಗಾಗಿ ಅಲೆಮಾರಿಗಳು ತಮ್ಮ ನೆಲೆಗಾಗಿ ಪರಿತಪಿಸುತ್ತಲೇ ಇವೆ. ಇವರಲ್ಲಿ ಹೆಳವ ಸಮುದಾಯದವರೂ ಒಬ್ಬರಾಗಿದ್ದಾರೆ.

ಒಂದು ಕಾಲದಲ್ಲಿ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ತುಂಬಾ ಗೌರವ ಸ್ಥಾನಮಾನ ಹೊಂದಿದ್ದ ಅಲೆಮಾರಿಗಳು ಕಾಲಾನಂತರದಲ್ಲಿ ಮೆಲ್ವರ್ಗದವರ ತಿರಸ್ಕಾರಕ್ಕೆ ಒಳಗಾಗಿ ಸಾಕಷ್ಟು ಕಷ್ಟಗಳನ್ನು, ನೋವುಗಳನ್ನು, ಅವಮಾನಗಳನ್ನು ಅನುಭವಿಸುತ್ತಲೇ ಬಂದಿದ್ದಾರೆ. ಇದನ್ನು ವಿರೋಧಿಸಬೇಕೆಂಬ ಆಸೆಯಿದ್ದರೂ, ಹೊತ್ತಿನ ಅನ್ನಕ್ಕೂ ಮೆಲ್ವರ್ಗದವರನ್ನೇ ಅವಲಂಬಿಸಬೇಕಾಗಿರುವುದರಿಂದ ಅನಿವಾರ್ಯವಾಗಿ ಸಹಿಸಿಕೊಂಡಿದ್ದಾರೆ.

ಇಂದು ಕೈಗಾರಿಕರಣ, ನಗರಿಕರಣ, ತಂತ್ರಜ್ಞಾನ, ಶಿಕ್ಷಣದ ಪ್ರಭಾವದಿಂದಾಗಿ ಆಧುನಿಕತೆಯ ಗಾಳಿ ಇವರ ಮೇಲೂ ಬೀಸಿದೆ. ಇಂದಿನ ಯುವ ಪೀಳಿಗೆಯವರು ತಮ್ಮ ಹಿರಿಯರ ಜೊತೆ ಒಕ್ಕಲು ಮನೆಗಳಿಗೆ ಹೋದಾಗ ಅನುಭವಿಸಿದ ಸಾಮಾಜಿಕ ಅವಮಾನಗಳನ್ನು ನೆನಪಿಸಿ

ಕೊಳ್ಳುತ್ತಿದ್ದಾರೆ. ಪಾರಂಪರಿಕ ವೃತ್ತಿಯನ್ನು ಬದಿಗೊತ್ತಿ ಸ್ವಾಭಿಮಾನದಿಂದ ಬದುಕಬೇಕೆಂಬ ಛಲ ಹೊತ್ತಿದ್ದಾರೆ. ಹಾಗೆಂದಾಕ್ಷಣ ಎಲ್ಲರೂ ಪಾರಂಪರಿಕ ವೃತ್ತಿಯನ್ನು ತೊರೆಯುತ್ತಿದ್ದಾರೆ ಎಂದರ್ಥವಲ್ಲ. ಅವರಲ್ಲಿ ಕೆಲವರು ಪಾರಂಪರಿಕ ವೃತ್ತಿ ಬಗ್ಗೆ ಅಪಾರ ಗೌರವವಿಟ್ಟುಕೊಂಡು ಅದರಲ್ಲೇ ಮುಂದುವರಿಯುತ್ತಿದ್ದಾರೆ. ಇನ್ನು ಕೆಲವರು ಅಲ್ಪ, ಸ್ವಲ್ಪ ಸ್ಥಿತಿವಂತರು, ಶಿಕ್ಷಣ ಪಡೆದವರು, ಸಾಮಾಜಿಕ ಅಸಮಾನತೆಯನ್ನು ದ್ವೇಷಿಸುವವರು, ಭವಿಷ್ಯದ ಬಗ್ಗೆ ಕನಸುಕಟ್ಟಿಕೊಂಡವರು ಬದಲಾವಣೆಯನ್ನು ಬಯಸಿ ಇತರ ವೃತ್ತಿಗಳತ್ತ ಮುಖ ಮಾಡುತ್ತಾ ಪಾರಂಪರಿಕ ವೃತ್ತಿಯನ್ನು ತೊರೆದು ತಮ್ಮ ಅಂತಸ್ತನ್ನು, ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳಲು ಯತ್ನಿಸುತ್ತಿದ್ದಾರೆ.

**ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರ ಸಾಮಾಜಿಕ ಸ್ಥಿತಿಗತಿಗಳು**

ನಾವು ಭಾರತದ ಇದುವರೆಗಿನ ಇತಿಹಾಸವನ್ನು ನೋಡುತ್ತಾ ಬಂದರೆ ಯಾರಿಗೆ ಸಂಪತ್ತು, ಅಧಿಕಾರ ಇರುವುದಿಲ್ಲವೊ ಅವರು ಗೌರವ, ಅಂತಸ್ತಿನಿಂದ ವಂಚಿತರಾಗಿರುವುದು ಕಂಡುಬರುತ್ತದೆ. ಹೀಗಾಗಿ ಹೆಳವ ಸಮುದಾಯದವರಲ್ಲಿ ಪಾರಂಪರಿಕ ವೃತ್ತಿ ಅನುಸರಿಸುವವರು ಮತ್ತು ತೊರೆದವರಲ್ಲಿ ಸಾಮಾಜಿಕವಾಗಿ ಅಂತಹ ವ್ಯತ್ಯಾಸಗಳನ್ನು ಗುರಿತಿಸಲಾಗದು. ಏಕೆಂದರೆ ಅವರ ಪಾಲಿಗೆ ಅಂತಸ್ತು, ಅಧಿಕಾರ, ಸಂಪತ್ತು ಎಂಬುವುದು ಮರಿಚಿಕೆಯಾಗಿದೆ.

ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರು ಕೂಡ ನಮ್ಮ ಸಮಾಜದ ಸ್ತರವಿನ್ಯಾಸದ ಕೊನೆಯಲ್ಲೆ ಬದುಕುತ್ತಿದ್ದಾರೆ. ಮೆಲ್ವರ್ಗದವರ ತಿರಸ್ಕಾರಕ್ಕೆ ಒಳಗಾಗಿ ಅವಮಾನಕರವಾದ ಜೀವನ ನಡೆಸುತ್ತಿದ್ದಾರೆ. ತಮಗೂ ಒಳ್ಳೆಯ ಅವಕಾಶ ದೊರೆಯುಬಹುದೆಂಬ ನಿರೀಕ್ಷೆಯಲ್ಲೆ ದಿನದೂಡುತ್ತಿದ್ದಾರೆ. ಆದರೆ ಆಧುನಿಕ ಅವಕಾಶಗಳಾವುವು ಈ ಸಮುದಾಯಗಳಿಗೆ ಸಿಗುತ್ತಿಲ್ಲ. ಈ ಅವಕಾಶಗಳನ್ನು ಪಡೆಯುವ ಯಾವ ಪ್ರಾಥಮಿಕ ತಯಾರಿಕೆಯೂ ಇವರಲ್ಲಿ ಇಲ್ಲವಾಗಿದೆ. ಅಲ್ಲದೆ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಗೊಳಿಸಿಕೊಳ್ಳಲು ಬೇಕಾದ ಅವಕಾಶಗಳು ದೊರೆತಿಲ್ಲ. ಏಕೆಂದರೆ ಭೂ ಮಾಲಿಕರನ್ನು ಅವಲಂಬಿಸಿ ಬದುಕಬೇಕಾಗಿರುವ ಇವರು ಅವರನ್ನು ಎದುರಿಸಿ ನಿಂತಾಗ ಮಾತ್ರ ತಮ್ಮ ಸ್ಥಾನಮಾನವನ್ನು ಉತ್ತಮಗೊಳಿಸಿಕೊಳ್ಳಲು ಸಾದ್ಯ. ಆದರೆ ಹೆಳವ ಸಮುದಾಯದವರಿಗೆ ಇಂತಹ ಸ್ಪರ್ಧೆಗೆ ನಿಲ್ಲುವ ಶಕ್ತಿಯಿಲ್ಲ. ಅಲ್ಲದೆ ಅದು ಅಸಾಧ್ಯವಾಗಿರುವ ಸ್ಥಿತಿಯಲ್ಲಿ ಅವರು ಬದುಕುತ್ತಿದ್ದಾರೆ. ಇತ್ತೀಚೆಗೆ ಸತತ ಪರಿಶ್ರಮದಿಂದ ಶೋಷಣೆ ಮತ್ತು ಅವಮಾನಗಳನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆಧುನಿಕ ಸಮಾಜದ ಜೊತೆ ಸ್ಪರ್ಧಿಸುವ ಮನೊಭಾವನೆ ಹೊಂದುತ್ತಿದ್ದಾರೆ. ಸಾಮಾಜಿಕ ಸ್ಥಾನಮಾನಗಳನ್ನು ಪಡೆಯಲು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾರೆ.

ಹಲವಾರು ಶತಮಾನಗಳಿಂದಲು ಮೆಲ್ವರ್ಗದ ಅಥವಾ ಆಳುವ ವರ್ಗದಿಂದ ಶೋಷಣೆ, ಅವಮಾನಗಳನ್ನು ಅನುಭವಿಸುತ್ತಿರುವುದು ಒಂದಡೆಯಾದರೆ, ಇತ್ತೀಚೆಗೆ ಪಾರಂಪರಿಕ ವೃತ್ತಿಯನ್ನು ಅನುಸರಿಸುತ್ತಿರುವ ಹೆಳವರನ್ನೆ ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರು ಕೀಳು ದೃಷ್ಠಿಯಿಂದ ಕಾಣುತ್ತಿರುವುದು, ಅವಮಾನಮಾಡುತ್ತಿರುವುದು ಕಂಡುಬರುತ್ತಿದೆ ಉದಾಹರಣೆಗೆ ಪಾರಂಪರಿಕ

ವೃತ್ತಿ ಅನುಸರಿಸುತ್ತಿರುವ ಹೆಳವರ ಮನೆಗೆ ಪಾರಂಪರಿಕ ವೃತ್ತಿ ತೊರೆದ ಹೆಳವರು ಹೆಣ್ಣು ಕೊಡಲು ಅಥವಾ ತೆಗೆದುಕೊಳ್ಳಲು ಹಿಂಜರಿಯುತ್ತಿರುವುದು. ಈ ಸ್ಥಿತಿ ಹಿಗೆಯೇ ಮುಂದುವರಿದಲ್ಲಿ, ಪಾರಂಪರಿಕ ವೃತ್ತಿ ಅನುಸರಿಸುವವರ ಮತ್ತು ಪಾರಂಪರಿಕ ವೃತ್ತಿ ತೊರೆದವರ ನಡುವೆಯೇ ದೊಡ್ಡ ಕಂದಕವೇರ್ಪಡುವುದು ಸ್ಪಷ್ಟ.

**ಪಾರಂಪರಿಕ ವೃತ್ತಿಯನ್ನು ತೊರೆದ ಹೆಳವರ ಆರ್ಥಿಕ ಸ್ಥಿತಿಗತಿಗಳು**

ಅಲೆಮಾರಿಗಳು ಜೀವನದುದ್ದಕ್ಕೂ ಅನೇಕ ರೀತಿಯ ಸಮಸ್ಯೆಗನ್ನು, ಸಂಕಷ್ಟಗಳನ್ನು ಅನುಭವಿಸಿಕೊಂಡೆ ಬಂದಿದ್ದಾರೆ. ಇಂದಿಗೂ ಸಹ ಸಂಕಷ್ಟದಲ್ಲಿಯೇ ದಿನದೂಡುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಆರ್ಥಿಕ ಬದಲಾವಣೆಗಳು ಹಲವು ಬಗೆಯಾಗಿ ಹರಡಿಕೊಂಡು ಬಂದಿವೆ. ಇವರ ವೃತ್ತಿ ಕುಲಕಸುಬುಗಳ ಹಿನ್ನೆಲೆಯಲ್ಲಿ ನಡೆದುಕೊಂಡು ಬಂದ ಬದಲಾವಣೆಗಳು ಹಾಗೆಯೇ ಉಳಿದು ಬಿಟ್ಟಿವೆ. ಭಾರತದಲ್ಲಿ ಬಹಳ ಹಿಂದಿನಿಂದಲೂ ಹಿಂದೂಳಿದ ವರ್ಗಗಳು ಕಂಡುಬಂದಿವೆ. ಅವರು ಮುಂದುವರೆದಿರುವ ಮತ್ತು ಮೇಲ್ಜಾತಿಯವರ ಶೋಷಣೆಗೆ ನಿರಂತರವಾಗಿ ಒಳಗಾಗಿ ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದೂಳಿದಿದ್ದಾರೆ. ಶತಶತಮಾನಗಳಂದ ತುಳತಕ್ಕೆ ಒಳಗಾಗಿ ವಿದ್ಯೆಯಿಂದ ವಂಚಿತರಾಗಿ, ಹೊಟ್ಟೆಗಿಲ್ಲದೆ ಬಡತನದಿಂದ ನರಳ ಮೈ ಮುರಿಯುವಂತೆ ದುಡಿದು ತಾವು ಯಾವ ಸುಖವನ್ನು ಅನುಭವಿಸದೇ ಮೇಲ್ಜಾತಿಯವರ ಮೋಜಿಗಾಗಿ ದುಡಿದವರಾಗಿದ್ದಾರೆ. ಹೋಲ, ಗದ್ದೆಗಳಲ್ಲಿ ದುಡಿದು ಆಹಾರ ಪದಾರ್ಥಗಳನ್ನು ಬೆಳೆದು ಅರೆ ಹೊಟ್ಟೆಯಲ್ಲಿ ಹಸಿವಿನಿಂದ ಬಳಲಿದ್ದಾರೆ. ಮೇಲ್ಜಾತಿಯವರ ಸೇವೆಯೆ ತಮ್ಮ ಜೀವನದ ವ್ಯಾವಹಾರ ವೆಂದು ನಂಬಿ ಗುಲಾಮರಾಗಿ ದುಡಿದಿದ್ದಾರೆ. ಇಂತಹ ಇವರ ಬದುಕಿನ ಸ್ಥಿತಿಯನ್ನು ಗಮನಿಸಿದರೆ ಇವರ ಆರ್ಥಿಕ ಸ್ಥಿತಿ ಹೇಗಿರಬಹುದು ಎಂಬುವುದನ್ನು ನೀವೆ ಊಹಿಸಬಹುದಾಗಿದೆ.

ಪಾರಂಪರಿಕ ವೃತ್ತಿಯ ಸಮುದಾಯಗಳು ಹೇಗೊ ತಮ್ಮ ವೃತ್ತಿಯಿಂದ ಹೊಟ್ಟೆ ಹೊರೆಯುತ್ತಿದ್ದವು. ಅಷ್ಟರಲ್ಲಿ ಆಧುನಿಕ ತಂತ್ರಜ್ಞಾನ, ಕೈಗಾರಿಕೆಗಳು ಇವರ ಪಾರಂಪರಿಕ ವೃತ್ತಿ ಮೇಲೆ ಗದಪ್ರಹಾರ ಮಾಡಿದವು. ಆಧುನಿಕ ಟಿ.ವಿ. ಚಲನಚಿತ್ರ ಮಾಧ್ಯಮಗಳು ವೃತ್ತಿಗಾಯಕರನ್ನು, ಪ್ರದರ್ಶನ ಕಲೆಯವರನ್ನು ಮೂಲೆಗೆ ತಳ್ಳಿದವು. ಊತ್ಪಾದಕ ವರ್ಗದವರನ್ನೇ ಅವಲಂಬಿಸಿ ಪಾರಂಪರಿಕ ವೃತ್ತಿ ನಿರ್ವಹಿಸುತ್ತಿದ್ದ ಸಮುದಾಯಗಳನ್ನು ಸಾಕುವ ಶಕ್ತಿಯನ್ನು ಉತ್ಪಾದಕ ವರ್ಗದವರು ಕಾಲಾನಂತರದಲ್ಲಿ ಕಳೆದುಕೊಳ್ಳುತ್ತಾ ಬಂದರು. ಒಟ್ಟಿನಲ್ಲಿ ಕೆಳ ವರ್ಗದ ಸಮುದಾಯಗಳು ಬದಲಾದ ಪರಿಸ್ಥಿತಿಗಳಲ್ಲೆಲ್ಲಾ ತಮ್ಮ ಪಾರಂಪರಿಕ ವೃತ್ತಿ ಕಾಪಾಡಿಕೊಳ್ಳುವ ಇಲ್ಲವೆ ಬಿಟ್ಟುಕೊಡುವ ಸಂಕಷ್ಟಕ್ಕೆ ಇಡಾಗುತ್ತಲೆ ಬಂದಿದ್ದಾರೆ. ಹೆಳವ ಸಮುದಾಯದವರು ಇದಕ್ಕೆ ಹೊರತಾಗಿಲ್ಲ. ಇವರಲ್ಲಿ ಕೆಲವರು ಪಾರಂಪರಿಕ ವೃತ್ತಿಯೇ ತಮ್ಮ ಉಸಿರು ಎಂದುಕೊಂಡಿದ್ದಾರೆ. ಇನ್ನು ಕೆಲವರಿಗೆ ಪಾರಂಪರಿಕ ವೃತ್ತಿ ಬಗ್ಗೆ ಗೌರವವಿದ್ದರೂ ಅದನ್ನು ತೊರೆಯುವುದು ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಯಿಂದ ಅನಿವಾರ್ಯವಾಗಿದೆ.

ಇಂದು ಎಲ್ಲಾ ಹೆಳವರು ಪಾರಂಪರಿಕ ವೃತ್ತಿಯಲ್ಲಿ ತೊಡಗಿಲ್ಲ. ಇವರಲ್ಲಿ ಕೆಲವರಿಗೆ ಪಾರಂಪರಿಕ ವೃತ್ತಿ ಬಗ್ಗೆ ಗೌರವವಿದ್ದರೂ ಸಹ ಒಕ್ಕಲು ಮನೆಗಳಿಗೆ ಹೋಗಿ ಕಾಡಿ, ಬೇಡಿ ದವಸ, ದಾನ್ಯ ಪಡೆದು ಇನ್ನೊಬ್ಬರ ಅಡಿಯಾಳಾಗಿ ಜೀವನ ನಡಸುವುದಕ್ಕಿಂತ ಸ್ವಾವಲಂಬಿಯಾಗಿ ದುಡಿದು ಬದುಕಬೇಕೆಂಬ ಮನೋಭಾವನೆಯಿಂದ ಇಂದು ಕೃಷಿ, ಕೂಲಿ, ವ್ಯಾಪಾರ, ಡ್ರೈವರ್, ಎಲ್.ಐ.ಸಿ. ಏಜೆಂಟ್‌ಗಳಾಗಿ ಮತ್ತು ಸರ್ಕಾರಿ ಹಾಗೂ ಖಾಸಗಿ ನೌಕರಿಗಳಲ್ಲಿ ತೊಡಗಿದ್ದಾರೆ. ಇವರ ವರಮಾನವನ್ನು ಈ ಕೆಳಗಿನ ಕೋಷ್ಟಕದಲ್ಲಿ ಕಾಣಬಹುದು.

**ಪಾರಂಪರಿಕ ವೃತ್ತಿ ತೊರೆದ ಹೆಳವರ ವರಮಾನ**

| ಕ್ರ.ಸಂ. | ಆದಾಯ | ಮಂಟೂರು | ಜೋಕಾನಟ್ಟಿ |
|---|---|---|---|
| ೧ | ೦೦೦೦-೫೦೦೦ | ೧೧ | ೧೩ |
| ೨ | ೫೦೦೧-೧೦,೦೦೦ | ೦೬ | ೦೮ |
| ೩ | ೧೦,೦೦೧-೨೦,೦೦೦ | ೦೭ | ೦೧ |
| ೪ | ೨೦,೦೦೧-೩೦,೦೦೦ | ೦೦ | ೦೧ |
| ೫ | ೩೦,೦೦೧- ಮೇಲ್ಪಟ್ಟು | ೦೧ | ೦೨ |
| | **ಒಟ್ಟು ಕುಟುಂಬಗಳು** | **೨೫** | **೨೫** |

ಅಧ್ಯಯನಕ್ಕಾಗಿ ಮಂಟೂರು ಮತ್ತು ಜೋಕಾನಟ್ಟಿ ಗ್ರಾಮಗಳಲ್ಲಿ ತಲಾ ೨೫ ಪಾರಂಪರಿಕ ವೃತ್ತಿ ತೊರೆದ ಕುಟುಂಬಗಳನ್ನು ಆಯ್ಕೆ ಮಾಡಲಾಗಿದ್ದು, ಇವರಲ್ಲಿ ಹಲವರು ಕೃಷಿಯ ಜೊತೆಗೆ ಇತರ ವೃತ್ತಿಗಳಲ್ಲಿ ತೊಡಗಿದ್ದರೂ ಸಹ ಆರ್ಥಿಕವಾಗಿ ಏನು ಬದಲಾಗಿಲ್ಲ. ಇಂದೂ ಬೆಲೆಗಳು ದಿನದಿಂದ ದಿನಕ್ಕೆ ಗಗನಕ್ಕೇರುತ್ತಿದ್ದರೂ ಕೂಡ ಇವರ ಅರ್ಧದಷ್ಟು ಜನರ ಆದಾಯ ೫,೦೦೦ ರೂ.ಗಳಿಗಿಂತ ಹೆಚ್ಚಿಲ್ಲ. ಕಾರಣ ಇವರು ಯಾವುದೇ ಲಾಭದಾಯಕ ಉದ್ಯೋಗಗಳಲ್ಲಿ ತೊಡಗ ದಿರುವುದು. ಇತರ ಜನರಂತೆ ಇವರಿಗೆ ಪೂರ್ವಜರ ಆಸ್ತಿ ಇಲ್ಲ. ತಮ್ಮ ದುಡಿಮೆಯತ್ತ ಜೀವನ ಸಾಗಿಸಬೇಕು. ಸರ್ವೆ ಮಾಡಿದ ೧೦೦ ಕುಟುಂಬಗಳಲ್ಲಿ ಕೇವಲ ೨ ಜನ ಮಾತ್ರ ಸರ್ಕಾರಿ ಉದ್ಯೋಗದಲ್ಲಿರುವುದು ಕಂಡು ಬಂದಿತು. ಇವರು ಆರ್ಥಿಕವಾಗಿ ಹಿಂದುಳಿಯಲು ಇವರಲ್ಲಿರುವ ಬಡತನ, ಅನಕ್ಷರತೆ, ಮಾರ್ಗದರ್ಶನದ ಕೊರತೆ, ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿರುವುದೇ ಕಾರಣವಾಗಿದೆ.

### ಪಾರಂಪರಿಕ ವೃತ್ತಿ ತೊರೆದವರು ಅವಲಂಬಿಸಿರುವ ಕಸುಬುಗಳು

| ಕ್ರ.ಸಂ. | ಗ್ರಾಮಗಳು | ಆಯ್ಕೆ ಮಾಡಿದ ಕುಟುಂಬಗಳು | ಕೃಷಿ | | | ಕೂಲಿ | | | ಸರ್ಕಾರಿ ನೌಕರಿ | | | ಖಾಸಗಿ ನೌಕರಿ | | | ಎಲ್.ಐ.ಸಿ.ಏಜೇಂಟ್ | | | ಟ್ಯಾಕ್ಸಿ ಡ್ರೈವರ್ | | | ವ್ಯಾಪಾರ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಮಂಟೂರು | ೨೫ | ೬ | – | ೬ | ೨೧ | ೨೭ | ೪೮ | ೧ | – | ೧ | ೩ | ೧ | ೪ | – | – | – | ೨ | – | ೨ | ೨ | – | ೨ |
| ೨ | ಜೋಕಾನಟ್ಟಿ | ೨೫ | ೧೦ | – | ೧೦ | ೨೬ | ೨೯ | ೫೫ | ೧ | – | ೧ | – | – | – | ೨ | – | ೨ | ೧ | – | ೧ | – | – | – |
| | ಒಟ್ಟು | ೫೦ | ೧೬ | – | ೧೬ | ೪೭ | ೫೬ | ೧೦೩ | ೨ | – | ೨ | ೩ | ೧ | ೪ | ೨ | – | ೨ | ೩ | – | ೩ | ೨ | – | ೨ |

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಆಯ್ಕೆ ಮಾಡಿದ ೫೦ ಕುಟುಂಬಗಳಲ್ಲಿ ಕೇವಲ ೧೬ ಜನ ಮಾತ್ರ ಕೃಷಿ ಕಾರ್ಯದಲ್ಲಿ ತೊಡಗಿರುವುದು ಕಾಣುತ್ತೇವೆ. ಕಾರಣ ಪಾರಂಪರಿಕ ವೃತ್ತಿ ತೊರೆದವರ ಕೃಷಿ ಭೂಮಿ ಸರಾಸರಿ ೧.೭೪ ಎಕರೆ ಮಾತ್ರ ಇರುವುದು ಕಾರಣವಾಗಿದೆ. ಹೀಗಾಗಿ ಪಾರಂಪರಿಕ ವೃತ್ತಿ ತೊರೆದವರು ಸಹ ಕೃಷಿಯಿಂದ ಬರುವ ಆದಾಯದಿಂದ ಜೀವನ ನಡೆಸಲು ಅಸಾಧ್ಯವೆಂಬ ಕಾರಣಕ್ಕಾಗಿ ಇವರಲ್ಲಿ ಮುಕ್ಕಾಲು ಭಾಗ ಜನ ತಮ್ಮ ಜಮೀನನ್ನು ಮೇಲ್ವರ್ಗದವರಿಗೆ ಒಪ್ಪಿಸಿ, ಅವರ ಜಮೀನಿನಲ್ಲೇ ೪೭ ಜನ ಪುರುಷರು ಮತ್ತು ೫೬ ಜನ ಮಹಿಳೆಯರು ಕೂಲಿ ಮಾಡುತ್ತಿರುವುದು ಕಂಡು ಬರುತ್ತದೆ. ಇವರಲ್ಲಿ ೨ ಜನ ಮಾತ್ರ ಪೋಲೀಸ್ ಮತ್ತು ಉಪನ್ಯಾಸಕರಾಗಿ ಸರ್ಕಾರಿ ಹುದ್ದೆಯಲ್ಲಿರುವುದು ಕಂಡು ಬರುತ್ತದೆ. ೩ ಜನ ಪುರುಷರು ಮತ್ತು ೧ ಮಹಿಳೆ ಖಾಸಗಿ ಶಾಲೆ ಮತ್ತು ಪ್ಯಾಕ್ಟರಿಯಲ್ಲಿ ದುಡಿಯುತ್ತಿದ್ದರೆ ೨ ಜನ ಎಲ್.ಐ.ಸಿ. ಏಜೆಂಟರಾಗಿ ಮತ್ತು ೩ ಜನ ಟ್ರ್ಯಾಕ್ಸಿ ಡ್ರೈವರ್‌ಗಳಾಗಿ ಇನ್ನು ೨ ಜನ ಕಾಳು ಮತ್ತು ಹಾಲಿನ ವ್ಯಾಪಾರಿಗಳಾಗಿ ಕಾರ್ಯ ನಿರ್ವಹಿಸುವುದು ಕಂಡು ಬರುತ್ತದೆ. ಇವರು ಆರ್ಥಿಕವಾಗಿ ಹೇಳಿಕೊಳ್ಳುವಂತಹ ಮುಂದುವರಿಕೆ ಹೊಂದದಿದ್ದರೂ ಪಾರಂಪರಿಕ ವೃತ್ತಿಯವರಿಗಿಂತ ಸ್ವಲ್ಪ ಉತ್ತಮವಾಗಿದ್ದಾರೆ.

ಪ್ರಪಂಚದಲ್ಲಿರುವ ಯಾವುದೇ ಒಂದು ಸಮುದಾಯ ಹಾಗೂ ವ್ಯಕ್ತಿಯ ಸ್ಥಾನಮಾನಗಳು ನಿರ್ಧಾರವಾಗುವುದು ಆ ಸಮುದಾಯ ಇಲ್ಲವೇ ಆ ವ್ಯಕ್ತಿ ಸಮಾಜದಲ್ಲಿ ಯಾವ ರೀತಿಯಲ್ಲಿ ಆರ್ಥಿಕ ಸಂಪತ್ತನ್ನು ಹೊಂದಿದ್ದಾನೆ ಎಂಬುದರ ಮೇಲೆಯೇ ಅವಲಂಬಿತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನಾವು ಭಾರತೀಯ ಸಮಾಜವನ್ನು ನೋಡುವುದಾದರೆ, ಭಾರತದಲ್ಲಿ ಅನೇಕ ಅಲೆಮಾರಿ ಸಮುದಾಯಗಳು ಒಂದಲ್ಲ ಒಂದು ರೀತಿಯಲ್ಲಿ ಆರ್ಥಿಕತೆಯಿಂದ ವಂಚಿತರಾಗಿ ಬೇರೆಯವರ ಆಧೀನದಲ್ಲಿ ಇರುವುದಷ್ಟೇ ಅಲ್ಲ. ಭಾರತದಲ್ಲಿ ಮೇಲ್‌ಸ್ತರದವರು ಅಲೆಮಾರಿಗಳ ಭೂಮಿಯನ್ನು ಆಕ್ರಮಿಸಿಕೊಂಡು ಅವರ ಭೂಮಿಯಲ್ಲಿಯೇ ಜೀತದಾಳುಗಳನ್ನಾಗಿ ದುಡಿಸಿಕೊಳ್ಳುತ್ತಾ ಬಂದಿರುವುದು ಕಂಡು ಬರುತ್ತದೆ. ಹೆಳವರು ಇದಕ್ಕೆ ಹೊರತಾಗಿಲ್ಲ.

# ಅಧ್ಯಾಯ – ೫

# ನೆಲೆನಿಂತ ಮತ್ತು ಅಲೆಮಾರಿ ಹೆಳವರ ಸಾಮಾಜಿಕತೆಯಲ್ಲಿನ ವೈರುಧ್ಯಗಳು

* ಪಾರಂಪರಿಕ ವೃತ್ತಿ ಮತ್ತು ವರ್ತಮಾನದಲ್ಲಿ ಸಮುದಾಯದ ಅಭಿವೃದ್ಧಿಯ ಸವಾಲುಗಳು
* ಹೆಳವ ಸಮುದಾಯ: ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ

## ನೆಲೆನಿಂತ ಮತ್ತು ಅಲೆಮಾರಿ ಹೆಳವರ ಸಾಮಾಜಿಕತೆಯಲ್ಲಿನ ವೈರುಧ್ಯಗಳು

**ನೆ**ಲೆನಿಂತ ಮತ್ತು ಅಲೆಮಾರಿ ಸಮುದಾಯಗಳ ನಡುವೆ ವೈರುದ್ಯಗಳಿರುವುದು ಸಹಜ. ಈ ದೇಶದ ಸಮಾಜದ ಐತಿಹಾಸಿಕ ಬೆಳವಣಿಗೆಯಲ್ಲಿ ಸೇವಕ ವರ್ಗಕ್ಕೆ ಸೇರಿದ ಹೆಳವರಂತಹ ಸಮುದಾಯಗಳು ಜೀವನೋಪಾಯಕ್ಕಾಗಿ ಉಳಿಗಮಾನ್ಯ ವ್ಯವಸ್ಥೆಯನ್ನೆ ಅವಲಂಬಿಸಿಕೊಂಡು ಬಂದವು. ಈ ಬಗೆಯ ಆರ್ಥಿಕ ಅವಲಂಬನೆಯು ಸಮುದಾಯವೊಂದರ ಸಮಾಜವನ್ನು ಹಲವು ವೈರುದ್ಯಗಳ ಜೊತೆ ರೂಪಿಸುತ್ತಾ ಬರುತ್ತದೆ. ನಿರ್ದಿಷ್ಟ ವಾಸದ ನೆಲೆ ಮತ್ತು ನಿಶ್ಚಿತ ಆರ್ಥಿಕ ಮೂಲಗಳು ಸಮುದಾಯವೊಂದರ ಸಾಮಾಜಿಕ ಮತ್ತು ಸಾಂಸ್ಕೃತಿಕ ರೂಪಗಳನ್ನು ರೂಪಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಆದರೆ ಅಲೆಮಾರಿಗಳ ಜೀವನ ವಿಧಾನವು ಇದಕ್ಕೆ ವಿಭಿನ್ನವಾದದ್ದು. ಹಾಗೆ ನೋಡಿದರೆ ಯಾವ ಸಮುದಾಯವೂ ಸಾಂಸ್ಕೃತಿಕವಾಗಿ ಒಂದು ಸಮಗ್ರತೆಯನ್ನು ಮತ್ತು ಒಂದೇ ರೀತಿಯ ಆಕಾರವನ್ನು ಪಡೆದಿರಲು ಸಾಧ್ಯವಿಲ್ಲ. ಆದರೆ ಸ್ಥಿರ ಸಮುದಾಯಗಳಿಗೆ ಅದರಲ್ಲೂ ಅಧಿಕಾರಸ್ಥ ಸಮುದಾಯಗಳಿಗೆ ಈ ರೀತಿಯ ಸಮಗ್ರತೆಯು ಕಾಲದಿಂದ ಕಾಲಕ್ಕೆ ಬದಲಾದರೂ ಸಹ ಒಂದು ವಿಶಿಷ್ಟವಾದ ಸ್ಥಿತಿಯನ್ನು ಸಾಧಿಸಿಕೊಂಡು ಬಂದಿರುತ್ತವೆ. ಇದಕ್ಕೆ ಈ ಸಮುದಾಯಗಳ ಆರ್ಥಿಕ ಸ್ವಾವಲಂಬನೆ ಮತ್ತು ಸಾಮಾಜಿಕ ಅಂಶಗಳು ಕಾರಣವಾಗಿರುತ್ತವೆ. ಆದರೆ ಅಲೆಮಾರಿಗಳಿಗೆ ಇವು ಹಲವು ದಶಕಗಳ ಕಾಲ ಸಿಗದೇ ಹೋಗಿವೆ. ಅಲ್ಲದೆ ಅಲೆಮಾರಿ ಸಮುದಾಯವೊಂದು ನೆಲೆನಿಂತ ತನ್ನದೇ ಗುಂಪಿಗೆ ಸಾಮಾಜಿಕವಾಗಿ ಮತ್ತು ಸಾಸ್ಕೃತಿಕವಾಗಿ ಅಪರಿಚಿತವಾಗಿ ಬಿಡುವುದು ಭಾರತೀಯ ಸಮಾಜದಲ್ಲಿ ಸಾಮಾನ್ಯವಾಗಿ ನಡೆದುಕೊಂಡು ಬಂದಿದೆ.

ಸಾಮಾಜಿಕವಾಗಿ ನೆಲೆನಿಂತ ಮತ್ತು ಅಲೆಮಾರಿ ಹೆಳವ ಸಮುದಾಯಗಳ ನಡುವೆ ಅಂತಹ ವ್ಯತ್ಯಾಸಗಳೇನು ಕಂಡುಬರುವುದಿಲ್ಲ. ಅಲೆಮಾರಿಗಳಂತೆಯೇ ನೆಲೆನಿಂತವರು ಕೂಡ ಈ ದೇಶದ

ಸ್ತರವಿನ್ಯಾಸದ ಕೊನೆಯಲ್ಲಿ ಬದುಕುತ್ತಿದ್ದಾರೆ. ಜೊ ತೆಗೆ ಎರಡು ಗುಂಪುಗಳು ಮುಖ್ಯವಾಹಿನಿಯಿಂದ ಅವಮಾನ ಮತ್ತು ತಿರಸ್ಕಾರಗಳನ್ನು ಅನುಭವಿಸಿವೆ. ಆದರೆ ನೆಲೆನಿಂತವರು ಕಳೆದ ಹಲವಾರು ವರ್ಷಗಳ ಸತತ ಪರಿಶ್ರಮದಿಂದ ಅವಮಾನವನ್ನು ಮತ್ತು ತಿರಸ್ಕಾರವನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆಧುನಿಕ ಸಮಾಜದ ಜೊ ತೆ ಸ್ಪಂದಿಸುವ ಮನೋಭಾವವನ್ನು ರೂಡಿಸಿಕೊಂಡಿದ್ದಾರೆ. ಜೊ ತೆಗೆ ಶೋಷಣೆ ಮತ್ತು ಸಾಮಾಜಿಕ ಅವಮಾನಗಳು ನೆಲೆನಿಂತವರನ್ನು ಹಿಂದಿನ ಮಟ್ಟದಲ್ಲಿ ಈಗ ಹಿಂಸಿಸುತ್ತಿಲ್ಲ. ಆದರೆ ರಾಜ್ಯದ ಹಲವು ಕಡೆ ನೆಲೆನಿಂತವರೆಲ್ಲರಿಗೂ ಈ ಬಗೆಯ ಅವಕಾಶಗಳಲ್ಲ. ಉದಾಃ ಗುಲಬರ್ಗಾ ಜಿಲ್ಲೆಯ ಜೆವರ್ಗಿ ತಾಲೂಕಿನ ಬಳುಂಡಗಿ ಗ್ರಾಮದಲ್ಲಿ ಹೆಳವರು ಚಹದ ಅಂಗಡಿಯಲ್ಲಿ ಪ್ರತ್ಯೇಕವಾದ ಲೋಟ ಬಳಸಬೇಕಾಗಿರುವುದು ಮತ್ತು ಮೆಲ್ವರ್ಗದವರ ಸರಿಸಮನಾಗಿ ಕುಳತುಕೊಳ್ಳಲು ಅವಕಾಶವಿಲ್ಲದಿರುವುದು. ಮತ್ತು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಸಿಂದಗಿರಿ

ಗ್ರಾಮದ ಹೆಳವರು ಊರಿನ ಜಾತ್ರೆ, ಉತ್ಸವ ಅಥವಾ ಮೆಲ್ವರ್ಗದವರು ವಿವಾಹ ಸಮಾರಂಭ ಗಳನ್ನು ಮಾಡಿದಾಗ ಇವರನ್ನು ಊಟಕ್ಕೆ ಕರೆದರೆ ತಟ್ಟೆ, ಲೋಟಗಳನ್ನು ತೆಗೆದುಕೊಂಡು ಹೋಗಬೇಕಾಗಿರುವುದು. ಅಲ್ಲದೆ ಅವರ ಊಟದ ನಂತರವೇ ಊಟ ಮಾಡಬೇಕಾಗಿರುವುದು.

ಕೆಲವು ಪ್ರದೇಶಗಳಲ್ಲಿ ನೆಲೆನಿಂತ ಹೆಳವರು ಇಂದಿಗೂ ಕೂಡ ಸಾಮಾಜಿಕ ಸ್ಥಾನಮಾನಗಳನ್ನು ಪಡೆಯಲು ಇನ್ನಿಲ್ಲದಂತೆ ಯತ್ನಿಸುತ್ತಿದ್ದಾರೆ. ಆದರೆ ಈ ಜಿಲ್ಲೆಗಳ ಕೆಲವು ಗ್ರಾಮಗಳಲ್ಲಿ ಹೆಳವರ ಒಟ್ಟಾರೆ ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳುವಂತಹ ಅವಕಾಶಗಳು ದೊರೆಯದ ಕಾರಣ ಇಲ್ಲಿನ ಹೆಳವರ ಸಾಮಾಜಿಕ ಸ್ಥಾನಮಾನಗಳು ಬೇರೆ ಪ್ರದೇಶಗಳಲ್ಲಿ ನೆಲೆನಿಂತವರಿಗೆ ಹೋಲಿಸಿದಲ್ಲಿ ಉತ್ತಮಗೊಂಡಿಲ್ಲದಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಇಂದು ನೆಲೆನಿಂತಿರುವವರು ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಆಧುನಿಕ ಜಗತ್ತಿನ ಜೊ ತೆಗೆ ಸ್ಪರ್ಧೆಗೆ ತೊಡಗಿರುವುದು ಕಂಡುಬರುತ್ತದೆ.

ಆದರೆ ಅಲೆಮಾರಿ ಹೆಳವರಿಗೆ ಈ ರೀತಿಯ ಸ್ಪರ್ಧೆ ಇನ್ನು ಸಾಧ್ಯವಾಗಿಲ್ಲ. ತಮ್ಮ ಸ್ಥಿತಿ ಯನ್ನು ಈ ಅಲೆಮಾರಿಗಳು ಶಾಪದಂತೆ ಪರಿಗಣಿಸಿದ್ದಾರೆ. ಈ ಶಾಪದಿಂದ ಮುಕ್ತಿ ಸಿಗುವವರೆಗು ತಾವು ಹೀಗೆಯೇ ಬದುಕಬೇಕಾಗುತ್ತದೆ ಎಂಬ ಅಸಹಾಯಕತೆಯಲ್ಲಿ ಬದುಕುತ್ತಿದ್ದಾರೆ. ಆಧುನಿಕ ಅವಕಾಶಗಳಾವವು ಈ ಸಮುದಾಯಗಳಿಗೆ ಸಿಗುತ್ತಿಲ್ಲ. ಈ ಅವಕಾಶಗಳನ್ನು ಪಡೆದುಕೊಳ್ಳುವ ಪ್ರಾಥಮಿಕ ತಯಾರಿಯೂ ಈ ಸಮುದಾಯಕ್ಕೆ ಸಾಧ್ಯವಾಗಿಲ್ಲ. ಈ ಅಲೆಮಾರಿಗಳಿಗೆ ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಗೊಳಿಸಿಕೊಳ್ಳಲು ಬೇಕಾದ ಅವಕಾಶಗಳು ದೊರೆತಿಲ್ಲ. ಏಕೆಂದರೆ ಸಾಮಾಜಿಕ ಅವಮಾನಗಳನ್ನು ಮೀರಿ ಸಮುದಾಯವೊಂದು ಅದು ಮುಖ್ಯವಾಹಿನಿಯ ಜೊತೆಗೆ ಸ್ಪರ್ಧೆಗೆ ಇಳಿದಾಗ ಮಾತ್ರ. ಆದರೆ ಅಲೆಮಾರಿಗಳಿಗೆ ಇಂತಹ ಸ್ಪರ್ಧೆಗೆ ನಿಲ್ಲುವ ಶಕ್ತಿಯಿಲ್ಲ. ಸ್ಪರ್ಧೆ ಈ ಕ್ಷಣಕ್ಕೆ ಅವರಿಗೆ ಸಾಧ್ಯವೂ ಆಗಲಾರದ ಸ್ಥಿತಿಯಲ್ಲಿ ಇವರು ಬದುಕುತ್ತಿದ್ದಾರೆ.

ಈ ಕಾರಣದಿಂದಾಗಿಯೇ ನೆಲೆನಿಂತ ಮತ್ತು ಅಲೆಮಾರಿ ಹೆಳವರ ನಡುವೆ ಕೆಲವು ವೈರುಧ್ಯಗಳು ಕಾಣಿಸುತ್ತವೆ. ಆದರೆ ಸಾಮಾಜಿಕ ಸ್ಥಾನಮಾನಗಳ ವಿಷಯದಲ್ಲಿ ಈ ಎರಡು ಗುಂಪುಗಳು ಪಾರಂಪರಿಕ ಭಾರತೀಯ ಸಮಾಜದಲ್ಲಿ ಒಂದೇ ರೀತಿಯಲ್ಲಿ ಪರಿಗಣಿಸಲ್ಪಟ್ಟಿದೆ.

ನೆಲೆನಿಂತವರು ಮತ್ತು ಅಲೆಮಾರಿಗಳ ನಡುವಿನ ವೈರುಧ್ಯಗಳು ಹೆಚ್ಚಾಗಿ ಕಂಡುಬರುವುದು ಆರ್ಥಿಕ ಕ್ಷೇತ್ರಗಳಲ್ಲಿ. ಈ ಎರಡು ಗುಂಪುಗಳ ನಡುವೆ ಸಾಕಷ್ಟು ಪ್ರಮಾಣದ ಅಸಮಾನತೆಗಳು ಸಂಭವಿಸಿದ್ದು ಈ ಗುಂಪುಗಳು ಅವಲಂಬಿಸಿದ ಆರ್ಥಿಕ ಕಾರ್ಯಗಳಿಂದ ಆಧುನಿಕ ಪೂರ್ವ ಕಾಲಘಟ್ಟದಲ್ಲಿ ನೆಲೆನಿಲ್ಲಲು ಪ್ರಯತ್ನಿಸಿದ ಇಂದಿನ ಅಲೆಮಾರಿಗಳು ಪಾರಂಪರಿಕ ವೃತ್ತಿಯನ್ನೇ ನಂಬಿ ಬದುಕಲಾರಂಬಿಸಿದರು. ಆದರೆ ನೆಲೆನಿಂತವರು ಕೃಷಿ, ವ್ಯಾಪಾರ ಮುಂತಾದ ಮುಖ್ಯ ವಾಹಿನಿಯ ಆರ್ಥಿಕ ಚಟುವಟಿಕೆಗಳನ್ನು ರೂಡಿಸಿಕೊಂಡರು. ಹೀಗೆ ಆರ್ಥಿಕ ಕಾರಣಗಳಿಂದಾಗಿ ಬದಲಾದ ದಾರಿಗಳು ನೆಲೆನಿಂತ ಮತ್ತು ಅಲೆಮಾರಿ ಸಮುದಾಯಗಳ ನಡುವೆ ಹಲವಾರು ವೈರುಧ್ಯಗಳನ್ನು ಸೃಷ್ಠಿಸಿದ್ದಲ್ಲದೆ ಹೆಳವ ಸಮುದಾಯವು ನೆಲೆನಿಂತವರು ಮತ್ತು ಅಲೆಮಾರಿಗಳೆಂಬ ಗುಂಪುಗಳಲ್ಲಿ ವಿಘಟನೆಗೊಳ್ಳಲು ಸಹ ಕಾರಣವಾಯಿತು. ಈ ರೀತಿ ಭಿನ್ನತೆ ರೂಪಗೊಳ್ಳು ತ್ತಿರುವುದಕ್ಕೆ ಅಲೆಮಾರಿ ಮತ್ತು ನೆಲೆನಿಂತ ಸಮುದಾಯಗಳ ನಡುವಿನ ಆರ್ಥಿಕ ಚಟುವಟಿಕೆಗಳಿಗೆ ಶತಮಾನಗಳ ಅಂತರವಿರುವುದೇ ಕಾರಣವಾಗಿದೆ.

ಯಾವುದೇ ಸಮುದಾಯದ ಸಾಮಾಜಿಕ ಸ್ಥಾನಮಾನಗಳು ಅದು ಯಾವ ರೀತಿಯ ಆರ್ಥಿಕ ಚಟುವಟಿಕೆಗಳನ್ನು ಅಳವಡಿಸಿಕೊಂಡಿದೆ ಎಂಬುವುದರ ಮೇಲೆ ನಿರ್ಧಾರವಾಗುತ್ತದೆ. ನೆಲೆನಿಂತವರು ಆರ್ಥಿಕವಾಗಿ ಆಧುನಿಕ ಜಗತ್ತಿನ ಜೊತೆಗೆ ಹೊಂದಿಕೊಳ್ಳುತ್ತಿದ್ದಾರೆ. 'ನಾಗರಿಕ' ಜಗತ್ತಿನ ವೇಗದ ಜೊತೆಗೆ ತಾವು ಹೆಜ್ಜೆ ಇಡಲು ಯತ್ನಿಸುತ್ತಿದ್ದಾರೆ. ಮುಖ್ಯವಾಹಿನಿಯ ಜೊತೆಗೆ ಸ್ಪರ್ಧಿಸುತ್ತಿದ್ದಾರೆ. ಅಲ್ಪ, ಸ್ವಲ್ಪ ಅವಕಾಶಗಳು ಕೂಡ ದೊರೆತಿವೆ. ಆದರೆ ಅಲೆಮಾರಿಗಳು ಹಿಂದಿನ ತಲೆಮಾರಿನಂತೆ ಬದುಕುತ್ತಿರುವುದು ಕಂಡುಬರುತ್ತಿದೆ. ಆರ್ಥಿಕ ಮೂಲವಾಗಿ ಪಾರಂಪರಿಕ ವೃತ್ತಿಯನ್ನೆ ಅವಲಂಬಿಸಿದ್ದಾರೆ. ಆಳುವ ವರ್ಗ ನೀಡುವ 'ಹಿಡಿ' ಅನ್ನಕ್ಕೆ ಕೈ ಚಾಚಿದ್ದಾರೆ. ಪಾರಂಪರಿಕ ವೃತ್ತಿಯಿಂದ ಹೊಟ್ಟೆ ಹೊರೆಯುವುದು ಕಷ್ಟವೆನಿಸಿದರು ತಮ್ಮ ವೃತ್ತಿಯು "ದೇವರು ಕೊಟ್ಟ ವರ"ವೆಂದು ಭಾವಿಸಿದ್ದಾರೆ. ಹೀಗಿರುವಾಗ ಇವರಿಂದ ಆರ್ಥಿಕ ಸ್ವಾವಲಂಬನೆ ನಿರೀಕ್ಷಿಸುವು ದಾದರೂ ಹೇಗೆ? ಜೊತೆಗೆ ಪಾರಂಪರಿಕ ವೃತ್ತಿಯಿಂದಾಗಿ ಸಾಮಾಜಿಕ ಸ್ಥಾನಮಾನಗಳೂ ಉತ್ತಮವಾಗಿಲ್ಲ.

ಹೀಗೆ ನೆಲೆನಿಂತ ಮತ್ತು ಅಲೆಮಾರಿ ಹೆಳವರಲ್ಲಿ ಹಲವಾರು ವೈರುಧ್ಯಗಳು ಸೂಕ್ಷ್ಮವಾಗಿ ಕಂಡುಬರುತ್ತಿವೆ. ಆದರು ನೆಲೆನಿಂತ ಹೆಳವರು ಆರ್ಥಿಕವಾಗಿ ಅಂತಹ ಸಾಧನೆಯನ್ನು ಮಾಡಲಿಲ್ಲ. ಅಲೆಮಾರಿಗಳಿಗೆ ಹೋಲಿಸಿದಾಗ ಮಾತ್ರ ಅಲ್ಪ, ಸ್ವಲ್ಪ ಪ್ರಗತಿ ಸಾದಿಸಿರುವುದು ಕಂಡುಬರುತ್ತದೆ. ಇಂದಿನ ವರ್ತಮಾನದಲ್ಲಿ ನೆಲೆನಿಂತ ಮತ್ತು ಅಲೆಮಾರಿ ಗುಂಪುಗಳಲ್ಲಿ ಸಾಮಾಜಿಕವಾಗಿ

ಮತ್ತು ಆರ್ಥಿಕವಾಗಿ ಭಿನ್ನತೆಗಳವೆ. ಈ ಭಿನ್ನತೆಗಳು ಸೂಕ್ಷ್ಮ ನೆಲೆಯಲ್ಲಿವೆಯೇ ಹೊರತು ಅಗಾಧ ವ್ಯತ್ಯಾಸಗಳು ಕಂಡುಬರುವುದಿಲ್ಲ. ನೆಲೆನಿಂತ ಸಮುದಾಯ ಸಾಮಾಜಿಕವಾಗಿ, ಆರ್ಥಿಕ ವಾಗಿ ಮುಖ್ಯವಾಹಿನಿಯ ಜೊ ತೆ ಸ್ಪರ್ಧೆಗಿಳದಿದ್ದರೂ ಸಹ ಅಂತಹ ಹೇಳಕೊಳ್ಳುವಂತಹ ಬದಲಾವಣೆಗಳೆನು ಸಂಭವಿಸಿಲ್ಲ. ಅಲೆಮಾರಿ ಗುಂಪುಗಳಂತು ಇಂತಹ ಸ್ಪರ್ಧೆಗಳಗೆ ಹೋಗದೆ ಇರುವುದರಿಂದ ಈ ಗುಂಪುಗಳ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಲ್ಲ ಅಂತಹ ಬದಲಾವಣೆ ಗಳಾಗಿಲ್ಲ. ಆದರೆ ಇತ್ತೀಚೆಗೆ ಎರಡು ಗುಂಪುಗಳಲ್ಲಿಯೇ ಶ್ರೇಷ್ಠ, ಕನಿಷ್ಟವೆಂಬ ಕಲ್ಪನೆ ಮೂಡುತ್ತಿದೆ. ನೆಲೆನಿಂತವರು ಪಾರಂಪರಿಕ ವೃತ್ತಿಯಲ್ಲಿರುವವರನ್ನು ಕೀಳಾಗಿ ಕಾಣುತ್ತಿದ್ದಾರೆ. ಅವರೊಡನೆ ಸಂಬಂಧಗಳನ್ನು ಬೆಳೆಸಲು ಹಿಂಜರಿಯುತ್ತಿದ್ದಾರೆ. ಅಷ್ಟೇ ಅಲ್ಲದೆ ನೆಲೆನಿಂತ ಹೆಳವರು ಅಲೆಮಾರಿ ಹೆಳವರನ್ನು ಮಾತನಾಡಿಸಲು ಹೋದರೆ ಅನುಮಾನದಿಂದ ನೋಡುತ್ತಾರೆ. ಕಾರಣ ಇವರಿರ್ವರಲ್ಲು ಸಾಕಷ್ಟು ವೈರುಧ್ಯಗಳು ಕಂಡುಬರುತ್ತಿರುವುದು.

**ಪಾರಂಪರಿಕ ವೃತ್ತಿ ಮತ್ತು ವರ್ತಮಾನದಲ್ಲಿ ಸಮುದಾಯದ ಅಭಿವೃದ್ಧಿಯ ಸವಾಲುಗಳು**

**ಪಾರಂಪರಿಕ ವೃತ್ತಿ**

ಹೆಳವರು ಪ್ರಾಚೀನ ಕಾಲದಿಂದಲು ಸಮಾಜದ ಹಲವು ಕುಟುಂಬಗಳ ಜನನ, ಮರಣವನ್ನು ದಾಖಲು ಮಾಡುತ್ತಾ ಅದಕ್ಕೆ ಪ್ರತಿಫಲವಾಗಿ ದವಸ, ಧಾನ್ಯಗಳನ್ನು ಪಡೆದು ಜೀವನ ಸಾಗಿಸು ತ್ತಿರುವುದು ಕಾಣುತ್ತಿದ್ದೆವೆ. ಹಿಂದೆ ಹೆಳವರ ಪಾರಂಪರಿಕ ವೃತ್ತಿಗೆ ತುಂಬಾ ಗೌರವವಿತ್ತು. ಆದರೆ ಇಂದು ಆಧುನಿಕ ಪೀಳಗೆಯ ಜನ ಬಂದಂತೆ ಹಾಗು ಸರ್ಕಾರವು ಸ್ವಾತಂತ್ರ್ಯ ನಂತರ ಜನನ, ಮರಣ ದಾಖಲಾತಿಗಳನ್ನು ತಾನೆ ನಿರ್ವಹಿಸುತ್ತಿರುವುದರಿಂದ ಹೆಳವರ ಪಾರಂಪರಿಕ ವೃತ್ತಿಗೆ ಗೌರವ ಕಡಿಮೆಯಾಗುತ್ತಿದೆ. ಹಿಂದೆ ಗೌರವಿಸುತ್ತಿದ್ದ ಅದೇ ಜನ ಇಂದು ಅವರ ಅವಶ್ಯಕತೆ ಇಲ್ಲ ಎಂದಾಕ್ಷಣ ಇವರು ಮನೆಗಳಗೆ ಹೋದರೆ ತಿರಸ್ಕಾರದಿಂದ, ಕೀಳರಿಮೆಯಿಂದ ನೋಡುತ್ತಿದ್ದಾರೆ. ಆದರೆ ಹೆಳವರು ತುಂಬಾ ಸಂಪ್ರದಾಯವಾದಿಗಳು, ಮೂಢನಂಬಿಕೆ ಉಳ್ಳವರು ಮತ್ತು ಮುಗ್ಧರು ಆಗಿರುವುದರಿಂದ ತಮ್ಮ ವೃತ್ತಿಯನ್ನು ಬಿಡಲು ಮನಸ್ಸು ಮಾಡುತ್ತಿಲ್ಲ. ಕೆಲವರಿಗೆ ನಿಜ ಸ್ಥಿತಿಯ ಅರಿವಾಗಿ ಬೇರೆ ವೃತ್ತಿಗಳ ಮೂಲಕ ಬದುಕಲು ಇಚ್ಚಿಸಿದರು ಹಣ, ಶಿಕ್ಷಣ, ತರಬೇತಿ ಮತ್ತು ಮಾರ್ಗದರ್ಶಕರಿಲ್ಲದೆ ಅನಿವಾರ್ಯವಾಗಿ ಪಾರಂಪರಿಕ ವೃತ್ತಿಯಲ್ಲೇ ಅತಂತ್ರವಾದ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ.

**ವರ್ತಮಾನದಲ್ಲಿ ಸಮುದಾಯದ ಅಭಿವೃದ್ಧಿಯ ಸವಾಲುಗಳು**

ಜಗತ್ತಿನ ಉದ್ದಕ್ಕೂ ಇವತ್ತು ಮಾನವ ಸಮುದಾಯಗಳು ಪ್ರತ್ಯೇಕವಾಗಿ ಬದುಕಲು ಸಾಧ್ಯವಿಲ್ಲ. ಸಮಾಜದ ಸಮಸ್ಯೆಗಳ ಜೊ ತೆಗೆ ಬದುಕುವ ಮಾನವನು ಅನೇಕ ಸಂಘರ್ಷಗಳ ಜೊ ತೆಗೆ ಆಚಾರ, ವಿಚಾರ, ಸಂಸ್ಕೃತಿಯನ್ನು ರೂಪಿಸಿಕೊಂಡಿರುತ್ತಾನೆ. ಇನ್ನು ಆಧುನಿಕತೆಯ

ಪರಿಣಾಮ ಬೀರಿದ ಮೇಲೆ ಜಗತ್ತಿನ ಎಲ್ಲಾ ಸಾಮಾಜಿಕ ವ್ಯವಸ್ಥೆಗಳು ಒಂದಲ್ಲ ಒಂದು ರೀತಿಯಲ್ಲಿ ಅಲ್ಲಿನ ವ್ಯವಸ್ಥೆಯ ಮೂಲದಂತೆ ರೂಪಾಂತರಗೊಳ್ಳುತ್ತಿರುವುದು ಕಂಡುಬರುತ್ತದೆ.

ಆಧುನಿಕ ಜಗತ್ತಿನ ಹೊಸ ಜನಾಂಗದ ಆಶೋತ್ತರಗಳ ಜೊತೆಗೆ ಹಳ್ಳಿಯ ಬದುಕಿನ ಸಾಂಪ್ರದಾಯಿಕ ಸ್ಥಿರತೆಯ ಮೂಲಗಳು ಕಣ್ಮರೆಯಾಗಲು ಪ್ರಾರಂಭವಾಗಿವೆ ಈ ಸಂಪ್ರದಾಯದ ವರ್ತನೆಗಳು ತಲತಲಾಂತರದಿಂದ ಬಂದಿದ್ದು ಜಾತಿ, ವರ್ಗ, ಅಸಮಾನತೆಗಳ ಮೇಲೆ ನಿಂತಿದ್ದು ನಗರದ ಹೊಸ ಜನತೆಯ ಶಕ್ತಿಯ ಬೆಳವಣಿಗೆಯೊಂದಿಗೆ ನಶಿಸಿ ಅಂತ್ಯಗೊಳ್ಳುವುದಿಲ್ಲ. ಆದರೂ ಕೂಡ ಹಲವು ಬದಲಾವಣೆಗಳು ಕಾಣಲು ಸಾಧ್ಯವಿದೆ.

ಸಾಮಾನ್ಯವಾಗಿ ಅಲೆಮಾರಿ ಸಮುದಾಯಗಳ ಜನರು ಎಂದರೆ ಆರ್ಥಿಕ ದೃಷ್ಟಿಯಿಂದ ನಿಕೃಷ್ಟ ಜೀವನದ ಕೆಳಜಾತಿಗಳು ಎಂದೇ ಗುರುತಿಸಲಾಗುತ್ತಿದೆ. ಅಲೆಮಾರಿ ಸಮುದಾಯಗಳು ಇಂದು ಆಧುನಿಕತೆಯತ್ತ ಮುಖ ಮಾಡಿರುವುದು ಸಮುದಾಯಗಳಲ್ಲಾಗುತ್ತಿರುವ ರೂಪಾಂತರ ವೆಂದೇ ಗುರುತಿಸಬಹುದು. ಆದರು ಸಹ ಕೆಲವು ಜನ ಆಧುನಿಕತೆಯನ್ನು ಬಯಸುತ್ತಿಲ್ಲ. ಇವರಲ್ಲಿ ಹೆಳವರು ಕೂಡ ಒಬ್ಬರಾಗಿದ್ದಾರೆ. ಭಾರತದ ಹಲವಾರು ಪಾರಂಪರಿಕ ವೃತ್ತಿಗಳು ತಿವ್ರತರವಾದ ಕೈಗಾರಿಕರಣದಿಂದ ನಶಿಸಿ ಹೋಗಿವೆ. ಅನಿವಾರ್ಯವಾಗಿ ಇವರು ಪರ್ಯಾಯ ಕಸುಬುಗಳಲ್ಲಿ ತೊಡಗಿಸಿಕೊಳ್ಳಬೇಕಾಗಿದೆ. ಇವರ ಪಾರಂಪರಿಕ ವೃತ್ತಿಗಳು ಇಂದಿನ ಬಂಡವಾಳ ಶಾಹಿ ಉತ್ಪಾದನಾ ವ್ಯವಸ್ಥೆಯ ಜೊತೆ ಸ್ಪರ್ಧಿಸಲಾರದ ಸ್ಥಿತಿ ತಲುಪಿವೆ. ಇಂದು ಬಹುತೇಕ ಹೆಳವರು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಇದಕ್ಕೆ ಮುಖ್ಯಕಾರಣ ಇಂದಿಗೂ ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವುದು.

**ಇವರ ಮುಂದಿರುವ ಸವಾಲುಗಳು**

- ಆಧುನಿಕ ಜಗತ್ತಿಗೆ ತನ್ನನ್ನು ತಾನು ಸಜ್ಜುಗೊಳಿಸಿಕೊಳ್ಳಬೇಕಾಗಿದೆ.
- ತನ್ನ ಮೂಲ ವೃತ್ತಿಯನ್ನು ತೊರೆದು ಸ್ಪರ್ಧಾ ಜಗತ್ತಿಗೆ ದುಮುಖಬೇಕಾಗಿದೆ.
- ಎಲ್ಲರು ಇಂದಿನ ಸ್ಪರ್ಧಾ ಜಗತ್ತಿನಲ್ಲಿ ಶಿಕ್ಷಣ ಪಡೆಯುವುದು ಅನಿವಾರ್ಯವಾಗಿದೆ.
- ಸಮುದಾಯ ಮುಂದಾಳತ್ವ ವಹಿಸುವುದರೊಂದಿಗೆ ಮೂಲಭೂತ ಹಕ್ಕುಗಳಿಗಾಗಿ ಹೋರಾಡಬೇಕಾಗಿದೆ.
- ಇಂದಿನ ಆಧುನಿಕ ಸಮಾಜದಲ್ಲಿ ತನ್ನದೆ ಆದ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ.
- ಆರ್ಥಿಕ ಸ್ವಾವಲಂಬನೆಯನ್ನು ಹೊಂದಬೇಕಾಗಿದೆ.

ಹೆಳವರು ತಮ್ಮಲ್ಲಿರುವ ಕಂದಾಚಾರ, ಮೂಢನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ತೊರೆದು ಆಧುನಿಕ ಜನರೊಡನೆ ಸ್ಪರ್ಧಿಸಬೇಕಾಗಿದೆ. ಇಂದು ಕೈಗಾರಿಕರಣ, ನಗರೀಕರಣ,

ವಿಜ್ಞಾನ, ತಂತ್ರಜ್ಞಾನಗಳಿಂದಾಗಿ ಸಮಾಜ ಸಾಕಷ್ಟು ಅಭಿವೃದ್ಧಿ ಹೊಂದಿರುವುದರೊಂದಿಗೆ ಜನರ ಮನಸ್ಸುಗಳು ಕೂಡ ಬದಲಾಗಿವೆ. "ತಾನು ಬದುಕಬೇಕು ಜೊತೆಗೆ ಇತರರು ಬದುಕಲು ಅವಕಾಶ ಮಾಡಿಕೊಡಬೇಕು" ಎಂಬ ಕಲ್ಪನೆ ಜನರಲ್ಲಿ ಇಂದು ಕಾಣುತ್ತಿಲ್ಲ. ಇಂದು ನಿರುದ್ಯೋಗ ಸಮಸ್ಯೆಯಿಂದಾಗಿ ಅವಕಾಶಗಳು ಕಡಿಮೆ ಇರುವುದರಿಂದ ಆಧುನಿಕ ಸ್ಥಿತಿಗೆ ಯಾರು ಬಹುಬೇಗ ಹೊಂದಿಕೊಳ್ಳುತ್ತಾರೊ ಅವರು ಮಾತ್ರ ಅವಕಾಶಗಳನ್ನು ಪಡೆಯುತ್ತಿದ್ದಾರೆ. ಅಲ್ಲದೆ ಸಮಾಜದಲ್ಲಿ ಉತ್ತಮ ಅಂತಸ್ತು, ಗೌರವ, ಆಧುನಿಕ ಸೌಲಭ್ಯ ಹೊಂದುತ್ತಿದ್ದಾರೆ. ಆದ್ದರಿಂದ ಹೆಳವರು ತಮ್ಮ ಪಾರಂಪರಿಕ ವೃತ್ತಿಯನ್ನು ತೊರೆದು ಸ್ಪರ್ಧಾಜಗತ್ತಿಗೆ ದುಮುಖಬೇಕಾಗಿದೆ. ಇತರ ಸಮುದಾಯ ದವರಂತೆ ತಾವು ಶಿಕ್ಷಣ ಪಡೆಯುವುದು ಅನಿವಾರ್ಯವಾಗಿದೆ. ಇವರ ಶಿಕ್ಷಣ ಪ್ರಮಾಣ ಇತರ ಸಮುದಾಯಗಳಿಗಿಂತ ತುಂಬಾ ಕಡಿಮೆ ಇದೆ. ಅದರಲ್ಲಿ ಮಹಿಳೆಯರ ಶಿಕ್ಷಣ ಶೇ. ೨೬ ರಷ್ಟು ದಾಟಿಲ್ಲ. ಇದೇ ಸ್ಥಿತಿ ಮುಂದುವರೆದರೆ ಭವಿಷ್ಯದಲ್ಲಿ ಹೆಳವರು ಸಾಕಷ್ಟು ಸಮಸ್ಯೆ ಎದುರಿಸಬೇಕಾಗುತ್ತದೆ. ಇಂದಿನ ಆಧುನಿಕ ಜಗತ್ತಿನಲ್ಲಿ ಶಿಕ್ಷಣ ಪಡೆಯದಿದ್ದರೆ ಅವರ ಪರಿಸ್ಥಿತಿ "ಕಣ್ಣಿದ್ದು ಕುರುಡರಂತಾಗುತ್ತದೆ" ಹೆಳವರು ರಾಜಕೀಯವಾಗಿಯೂ ಕೂಡ ಸಾಕಷ್ಟು ಹಿಂದುಳಿದಿದ್ದಾರೆ. ಇವರಲ್ಲಿ ಒಗ್ಗಟ್ಟು, ಪ್ರಬಲ ನಾಯಕತ್ವವಿಲ್ಲದೆ ಇರುವುದು ಇದಕ್ಕೆ ಕಾರಣವಾಗಿದೆ. ಹೆಳವರು ಇಂದು ಸಮುದಾಯದ ಬಗ್ಗೆ ಕಾಳಜಿವುಳ್ಳ ನಾಯಕರ ಮುಂದಾಳತ್ವದಲ್ಲಿ ಮೂಲಭೂತ ಸೌಕರ್ಯ ಪಡೆದುಕೊಳ್ಳಲು ಹೋರಾಟ ಮಾಡಬೇಕಾಗಿದೆ. ಇಲ್ಲದಿದ್ದರೆ ಇವರು ಹಿಂದಿನ ಸ್ಥಿತಿಯಲ್ಲಿಯೆ ಪ್ರಬಲ ವರ್ಗದವರ ತುಳಿತಕ್ಕೆ, ಶೋಷಣೆಗೆ ಒಳಗಾಗಿಯೇ ಬದುಕು ಸಾಗಿಸ ಬೇಕಾಗುತ್ತದೆ. ಮೊದಲು ಹೆಳವರು ಒಂದೇಡೆ ನೆಲೆನಿಲ್ಲುವಂತಹ ಮನಸ್ಸು ಮಾಡಬೇಕು. ಹಾಗಿದ್ದಾಗ ಮಾತ್ರ ಇತರರಂತೆ ಇವರು ಕೂಡ ಆಧುನಿಕ ಪರಿಸ್ಥಿತಿಗಳನ್ನು ಅರ್ಥಮಾಡಿಕೊಂಡು ಸ್ಪರ್ಧಾ ಜಗತ್ತಿನಲ್ಲಿ ಬದುಕಲು ಸಾಧ್ಯವಾಗುತ್ತದೆ. ಜೊತೆಗೆ ಇಂದು ಹೆಳವರು ಆರ್ಥಿಕವಾಗಿ ಸ್ವಾವಲಂಬಿಗಳಾಗಿ ಬದುಕುವುದು ಅನಿವಾರ್ಯವಾಗಿದೆ. ಏಕೆಂದರೆ ಇಂದು ಸಮಾಜದಲ್ಲಿ ಆಸ್ತಿ, ಅಂತಸ್ತು, ಐಶ್ವರ್ಯವಿರದಿದ್ದರೆ ಗೌರವ ಕೊಡುವುದಿಲ್ಲ. ಅಂತಹವರನ್ನು ಸಮಾಜ ನಿಕೃಷ್ಟವಾಗಿ ಕಾಣುತ್ತದೆ.

ಇಂದು ಮಾನವೀಯ ಮೌಲ್ಯಗಳಿಗಿಂತ ಹಣಕ್ಕೆ ಪ್ರಾಶಸ್ತ್ಯವನ್ನು ಆಧುನಿಕ ಸಮಾಜ ನೀಡುತ್ತಿರುವುದರಿಂದ ಮೊದಲು ಹೆಳವರು ಇನ್ನೊಬ್ಬರನ್ನು ಅವಲಂಬಿಸಿ ಬದುಕುವುದನ್ನು ಬಿಟ್ಟು ಕೂಲಿಮಾಡಿಕೊಂಡಾದರು ಪರವಾಗಿಲ್ಲ ಸ್ವಾವಲಂಬಿಯಾಗಿ, ಸ್ವಾಭಿಮಾನದಿಂದ ಬದುಕಬೇಕಾಗಿದೆ.

**ಹೆಳವ ಸಮುದಾಯ: ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ**

ಕರ್ನಾಟಕದಲ್ಲಿ ಅನೇಕ ಅಲೆಮಾರಿ, ಅರೆಅಲೆಮಾರಿ ಸಮುದಾಯಗಳು ಕಂಡುಬರುತ್ತವೆ. ಇವೆಲ್ಲವು ಸ್ವತಂತ್ರ ಗುಂಪುಗಳಾಗಿ ಬದುಕುತ್ತಾ ತಮ್ಮ ಜೀವನಕ್ರಮ, ನಂಬಿಕೆ, ಸಂಪ್ರದಾಯ, ಆಚರಣೆಗಳಲ್ಲಿ ಸ್ವಂತಿಕೆಯನ್ನು ಕಾಯ್ದುಕೊಂಡು ಬಂದಿವೆ. ಪ್ರತಿಯೊಂದು ಸಮುದಾಯ ತನ್ನ

ಸ್ವತಂತ್ರ ಅಸ್ತಿತ್ವವನ್ನು ಕಾಯ್ದುಕೊಳ್ಳುವಲ್ಲಿ ಸದಾ ನಿರತವಾಗಿರುತ್ತದೆ. ನೆಲೆನಿಂತ ಸಮುದಾಯ ಗಳೊಂದಿಗೆ ಮುಖಾಮುಖಿಯಾಗುತ್ತಲೇ ತನ್ನತನವನ್ನು ಉಳಸಿಕೊಳ್ಳಲು ಸಂಘರ್ಷ ನಿರತವಾಗಿರುತ್ತದೆ. ನಗರೀಕರಣದ ಪ್ರಕ್ರೀಯೆಯಲ್ಲಿ ಕಂಡುಬರುವ ಐಕ್ಯತೆ, ಸಮಷ್ಠಿ ಬದುಕು ಅಲೆಮಾರಿ ಸಮುದಾಯಗಳಲ್ಲಿ ಇನ್ನೂ ಜೀವಂತವಾಗಿದೆ.

ಹೆಳವ ಸಮುದಾಯದಲ್ಲಿ ಕೆಲವರು ಸ್ಥಿರವಾಗಿ ನೆಲೆನಿಂತಿದ್ದರೆ ಇನ್ನು ಕೆಲವರು ಅರೆಅಲೆಮಾರಿಯಾಗಿ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಇವರು ಪ್ರಾಚೀನ ಕಾಲದಿಂದಲು ಒಕ್ಕಲು ಮನೆಯವರಿಗೆ ಸಂಬಂದಿಸಿದ ಜನನ, ಮರಣ, ಆಸ್ತಿ, ಮನೆದೇವರು, ಕುಲ, ಬಳ, ಬೆಡಗು, ಮೂಲಸ್ಥಳಗಳ ಬಗ್ಗೆ ದಾಖಲಾತಿಗಳನ್ನು ಹೊಂದಿರುವುದರಿಂದ ಒಂದು ಕಾಲದಲ್ಲಿ ಇವರ ವೃತ್ತಿಗೆ ತುಂಬಾ ಬೇಡಿಕೆ ಇತ್ತು. ಆಧುನಿಕ ಕಾಲಮಾನಕ್ಕೆ ತಕ್ಕಂತೆ ಜನರು ಬದಲಾಗುತ್ತಿರುವುದರಿಂದ ಮತ್ತು ಸರ್ಕಾರ ಇಂದು ಹೆಳವರ ದಾಖಲಾತಿ ಕಾರ್ಯವನ್ನು ತಾನೇ ನಿರ್ವಹಿಸುತ್ತಿರುವುದರಿಂದ ಇವರ ಬದುಕು ಇಂದು ಅತಂತ್ರವಾಗಿದೆ.

ಹೆಳವ ಸಮುದಾಯದಲ್ಲಿ ಕಂಡುಬರುವ ಒಳಾಡಳತ ವ್ಯವಸ್ಥೆ ತುಂಬಾ ವಿಶಿಷ್ಟವಾದುದು. ತಮ್ಮೊಳಗಿನ ನ್ಯಾಯವ್ಯವಸ್ಥೆ ಸರಳವಾಗಿಸಿಕೊಂಡು ತಮ್ಮದೆ ಆದ ಸಮುದಾಯದ ಪಂಚರನ್ನು ಒಳಗೊಂಡು, ಇನ್ನು ಕೆಲವು ಸಮಯಗಳಲ್ಲಿ ಹಳ್ಳಿಗಳಿಗೆ ಹೋದಾಗ ಏನಾದರು ಸಮಸ್ಯೆ ಉದ್ಭವಿಸಿದರೆ ತಾವೆ ನ್ಯಾಯ ತಿರ್ಮಾನ ಮಾಡಿಕೊಳ್ಳುವುದರ ಮೂಲಕ ತಮ್ಮ ಸಮುದಾಯದ ಬೇಕು, ಬೇಡಿಕೆಗಳನ್ನು ಅರ್ಥಮಾಡಿಕೊಳ್ಳುವ, ಸಾಮಾಜಿಕ ಕಾರ್ಯಗಳಿಗೆ ವಿಧಿ, ನಿಷೇಧ ಹೇರುವ, ಅಪರಾದಿಗಳಿಗೆ ದಂಡ ವಿಧಿಸುವ ನ್ಯಾಯ ಪಂಚಾಯಿತಿಗಳನ್ನು ಹೊಂದಿ ಶಾಂತಿಯುತ ಜೀವನವನ್ನು ಸಾಗಿಸುತ್ತಿದ್ದಾರೆ. ಹೆಳವರು ಅಲೆಮಾರಿಗಳಾದರು ಕೂಡ ತಾವು ಇರುವ ಸ್ಥಳಗಳಲ್ಲಿಯೆ ದೈವ, ಹುಟ್ಟು, ಬದುಕು, ಸೂತಕಕ್ಕೆ ಸಂಬಂದಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಆಧುನಿಕ ಕಾಲದಲ್ಲು ತಮ್ಮ ಕುಲ ಪದ್ಧತಿಗಳನ್ನು ಉಳಸಿಕೊಂಡು ಬಂದಿದ್ದಾರೆ. ಇವರು ಸುಮಾರು ೧೨೪ ಕ್ಕಿಂತಲೂ ಅಧಿಕ ಬೆಡಗುಗಳನ್ನು ಹೊಂದಿದ್ದು ಮದುವೆಯ ಸಂದರ್ಭದಲ್ಲಿ ಕೊಡು, ಕೊಳ್ಳುವಿಕೆ ಮಾಡುವಾಗ ಇವು ಬಹು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ.

ಮತೀಯ ಆಚರಣೆಗಳನ್ನು ತುಂಬಾ ಕಟ್ಟುನಿಟ್ಟಾಗಿ ಆಚರಿಸುವ ಇವರು ಹೆಣ್ಣಿನ ಬಗ್ಗೆ ತುಂಬಾ ಗೌರವ ವಿರಿಸಿಕೊಂಡಿದ್ದಾರೆ. ಹೆಣ್ಣು ಹುಟ್ಟಿದಾಗ ಇವರು ಸಂಭ್ರಮಿಸುವುದು ವಿಶೇಷವಾಗಿದೆ. ಇವರಲ್ಲಿ ಧಾರ್ಮಿಕ ಸಹಿಷ್ಣುತೆ ಇದೆ. ಈ ದೇವರು, ಆ ದೇವರು ಎಂಬ ಬೇದವಿಲ್ಲ. ತಾವು ಎಲ್ಲಿ ಉಳದುಕೊಳ್ಳುತ್ತಾರೆ ಅಲ್ಲಿಯೆ ತಮ್ಮ ಕುಲದೇವತೆಗಳ ಜೊತೆಗೆ ಸ್ಥಳಯ ದೇವರುಗಳನ್ನು ಸಹ ಪೂಜಿಸುವ ಪರಂಪರೆಯನ್ನು ಹೊಂದಿದ್ದಾರೆ. ಇವರ ಕುಟುಂಬ, ಮದುವೆ, ಬಂಧುತ್ವ, ಸಾಮಾಜಿಕ ಸಂಸ್ಥೆಗಳೆಲ್ಲವು ವೈಶಿಷ್ಟ್ಯಪೂರ್ಣವಾಗಿವೆ. ಇವರಲ್ಲಿ ಹೆಚ್ಚಿನ ವರದಕ್ಷಿಣೆ ತೆಗೆದುಕೊಂಡರೆ ಶ್ರೀಮಂತಿಕೆ ನಶಿಸಿ ಹೊಗುತ್ತದೆ ಎಂಬ ನಂಬಿಕೆಯು ರೂಢಿಯಲ್ಲಿರುವ ಅಂಶವು ನಮ್ಮ

ವರ್ತಮಾನದಲ್ಲಿ ಆಧುನಿಕ ಜನರಿಗೆ ನಾಚಿಕೆ ಎನಿಸುವಂತಿದೆ. ಇವರ ಉಡುಗೆ, ತೊಡುಗೆ ತುಂಬಾ ಸರಳವಾಗಿದ್ದು ಒಕ್ಕಲು ಮನೆಯವರು ಕೊಡುವ ಹಳೆ ಬಟ್ಟೆಗಳೆ ಇವರಿಗೆ ಆಧಾರವಾಗಿವೆ. ರಾಜಕೀಯವಾಗಿ ತುಂಬಾ ಹಿಂದುಳದಿರುವ ಇವರು ತಾವು ಯಾವುದಾದರು ಚುನಾವಣೆಗೆ ಸ್ಪರ್ಧಿಸಿದರೆ ಸ್ಥಳಿಯರ ಕೋಪಕ್ಕೆ ಗುರಿಯಾಗಬೇಕಾಗುತ್ತದೆ ಎಂಬ ಮನೋಭಾವನೆ ಹೊಂದಿದ್ದಾರೆ. ಇಂತಹ ಮುಗ್ಧ ಜನರನ್ನು ಸ್ಥಳಿಯ ಸ್ವಹಿತಾಸಕ್ತಿ ಮತ್ತು ಸ್ವಾರ್ಥಗಳಿಂದ ಕೂಡಿರುವ ರಾಜಕಾರಣಿಗಳು ಅಧಿಕಾರದ ಆಸೆಗಾಗಿ ಇವರನ್ನು ತಮ್ಮ ಮತಬ್ಯಾಂಕುಗಳಾಗಿ ಪರಿವರ್ತಿಸಿ ಕೊಂಡಿದ್ದಾರೆ. ಶೈಕ್ಷಣಿಕವಾಗಿ ಸಹ ಹಿಂದುಳದಿರುವ ಇವರು ಮಕ್ಕಳ ಶಿಕ್ಷಣಕ್ಕಾಗಿ ಶೈಕ್ಷಣಿಕ ಸಂಘ, ಸಂಸ್ಥೆಗಳನ್ನು ಅವಲಂಬಿಸದೆ ತಮ್ಮ ಮಕ್ಕಳಿಗೆ ತಾವೆ ಜನನ, ಮರಣ ದಾಖಲಾತಿ ಮಾಡಿಕೊಳ್ಳಲು ಬೇಕಾದ ಶಿಕ್ಷಣ ನೀಡಿ ತಮ್ಮ ಪಾರಂಪರಿಕ ವೃತ್ತಿಯಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಇಂದು ಇವಕ್ಕೆಲ್ಲಾ ಬೆಲೆ ಇಲ್ಲದಂತಾಗಿದೆ.

ಇಂದಿನ ಆಧುನಿಕ ಮಾನವ ತುಂಬ ಮುಂದುವರೆದಿದ್ದು ಹಕ್ಕಿಯಂತೆ ಆಕಾಶದಲ್ಲಿ ಹಾರಬಲ್ಲ, ಮೀನಿಗಿಂತ ವೇಗವಾಗಿ ನೀರಿನಲ್ಲಿ ಈಜಬಲ್ಲ, ಅಷ್ಟೆ ಅಲ್ಲ ಇಡೀ ಜಗತ್ತನ್ನೆ ತನ್ನ ಮುಷ್ಠಿಯಲ್ಲಿ ಹಿಡಿದು ಕೊಳ್ಳಬಲ್ಲವನಾಗಿದ್ದಾನೆ. ಕ್ಷಣಮಾತ್ರದಲ್ಲಿ ಯಾವುದೇ ದೇಶ ವಿದೇಶಗಳ ಮೂಲೆಯಲ್ಲಿರುವ ವ್ಯಕ್ತಿಗಳೊಡನೆ ಕುಳತಲ್ಲೆ ಮಾತನಾಡ ಬಲ್ಲವನಾಗಿದ್ದಾನೆ. ಸಾವನ್ನು ಎದುರಿಸಿ ನಿಲ್ಲ ಬಲ್ಲಂತಹ ಹಂತ ತಲುಪಿದ್ದಾನೆ. ಅಲೆಮಾರಿಗಳು ಮತ್ತು ಬುಡಕಟ್ಟು ಸಮುದಾಯಗಳ ಪಾಪ, ಪುಣ್ಯ, ಸ್ವರ್ಗ, ನರಕ, ಭೂತ ಲೋಕ, ಪ್ರೇತಲೋಕ, ದೇವಲೋಕಗಳ ಬಗ್ಗೆ, ಕಲ್ಪಿಸಿಕೋಂಡು ನಮ್ಮ ಇಹ ಲೋಕದ ಜೀವನದ ಜೊತೆಗೆ ಪರ ಲೋಕದ ಜೀವನದ ಬಗ್ಗೆ ಚಿಂತಿಸುತ್ತಿದ್ದಾರೆ. ಇಂದಿನ ಆಧುನಿಕ ಮಾನವ ಇಡಿ ಜಗತ್ತನ್ನೇ ಸುತ್ತಿ ಬಂದು, ನಾವೆಲ್ಲ ಕಲ್ಪಿಸಿಕೊಂಡಿರುವುದು ಭ್ರಮೆ ಎಂಬುವುದನ್ನು ನಿರೂಪಿಸಿದ್ದಾನೆ.

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಶ್ರಮ ವಿಭಜನೆ ಮತ್ತು ಜಾತಿ ಆಧಾರಿತ, ಪಾರಂಪರಿಕ ವೃತ್ತಿಗಳಿವೆ. ಆದರೆ ಕೈಗಾರಿಕೀಕರಣ, ನಗರೀಕರಣ ತಂತ್ರಜ್ಞಾನಗಳು, ಇವನ್ನೆಲ್ಲಾ ನುಂಗಿಹಾಕಿವೆ. ಪಾರಂಪರಿಕ ವೃತ್ತಿಗೆ ಇಂದು ಯಾವ ಬೆಲೆ ಇಲ್ಲ. ಇನ್ ಪೋಷಿಸ್, ವಿಪ್ರೋ, ರಿಲಿಯನ್ಸ ನಂತಹ ಕಂಪನಿಗಳು ಮತ್ತು ದೊಡ್ಡ ದೊಡ್ಡ ಐಟಿ, ಬಿಟಿ, ಕಂಪನಿಗಳು ವಿಜ್ಞಾನ, ತಂತ್ರಜ್ಞಾನಗಳು ಇಂದು ಭಾರತದ ಬೆನ್ನೆಲುಬಾಗಿರುವ, ಇಡೀ ಸಮಾಜಕ್ಕೆ ಅನ್ನ ನೀಡುತ್ತಿರುವ ಕೃಷಿಕನನ್ನೆ "ಅನುತ್ಪಾದಕ" ಎಂದು ನಿಂದಿಸುತ್ತಿವೆ. ಅಂತಹದರಲ್ಲಿ ಕೃಷಿಕನ್ನೆ ನಂಬಿಕೊ ಂಡು, ಅಲೆಮಾರಿಗಳಾಗಿ ಊರೂರು ಸುತ್ತುತ್ತಿರುವ ಹಗಲು ವೇಷಗಾರರು, ದುರಿಗಿ ಮುರುಗಿಯರು, ಡೊ ಂಬರು, ಕವಲೆತ್ತಿನವರು, ಸುಡುಗಾಡು ಸಿದ್ಧರು, ಹಕ್ಕಿ ಪಿಕ್ಕಿಯರು, ಅಡವಿ ಚೆಂಚರು, ಮತ್ತು ಹೆಳವರ ಪಾಡೇನು?. ಹಿಂದೆ ಇದ್ದ ಅಚರಣೆ ಸಂಪ್ರದಾಯ, ಮೂಡನಂಬಿಕೆ, ಮಾನವೀಯ, ಮೌಲ್ಯಗಳಿಗೆ ಇಂದು ಬೆಲೆ ಇಲ್ಲದಂತಾಗಿದೆ. ಇಂದಿನ ಆಧುನಿಕ ಜಗತ್ತಿನಲ್ಲಿ ಅಲೆಮಾರಿಗಳು ತಮ್ಮ ಪಾರಂಪರಿಕ

ವೃತ್ತಿಯೋಡನೆ ಸ್ಪರ್ಧಿಸುವುದು ಅಸಾಧ್ಯವಾಗಿದೆ. ಕೆಲವು ಪಟ್ಟ ಭದ್ರ ಸ್ವ ಹಿತಾಸಕ್ತಿ ವ್ಯಕ್ತಿಗಳು ಅಲೆಮಾರಿಗಳಲ್ಲಿ, ಆದಿವಾಸಿ ಬುಡಕಟ್ಟುಗಳಲ್ಲಿ ಮತ್ತು ಪರಿಶಿಷ್ಟ ಜನಾಂಗಗಳಲ್ಲಿ ಮಾತ್ರ ಭಾರತೀಯ ಸಂಸ್ಕೃತಿ ಅಡಗಿದೆ ಎಂದು ಸಾರ್ವಜನಿಕವಾಗಿ ಬೊಬ್ಬೆಹೊಡೆಯುತ್ತಾ ತಾವು ಮಾತ್ರ ಆಧುನಿಕ ಸೌಲಭ್ಯಗಳನ್ನು ಅನುಭೋಗಿಸುತ್ತಾ ಇಂದಿಗೂ ಸಹ ಅವರನ್ನು ಅಡಿಯಾಳುಗಳನ್ನಾಗಿಸಿಕೊಂಡು ಅವರ ಮೇಲೆ ಸವಾರಿ ಮಾಡುತ್ತಿದ್ದಾರೆ.

ಅಲೆಮಾರಿಗಳಾಗಿ ಬದುಕು ಸವೆಸುತ್ತಾ ಬಂದಿರುವ ಹೆಳವರು ತಮ್ಮ ವೃತ್ತಿ ಬದುಕಿನಲ್ಲಿ ಎದುರಿಸುತ್ತಿರುವ ವಾಸ್ತವಿಕ ಸಮಸ್ಯೆಗಳು ಹಿಂದಿನ ಸಮಸ್ಯೆಗಳಿಗಿಂತ ಭಿನ್ನವಾಗಿವೆ. ಸಮುದಾಯದ ಹಿಂದಿನ ಸಮಸ್ಯೆಗಳು ಸಮಾಜದ ಜೀವನದಲ್ಲಿ ಅನಿವಾರ್ಯ ಪ್ರಸಂಗಗಳಾಗಿದ್ದು ಹೆಜ್ಜೆ ಹೆಜ್ಜೆಗೂ ಗೋಚರವಾಗುತ್ತಿರಲಿಲ್ಲ. ಆದರೆ ಇಂದಿನ ಸಮಸ್ಯೆಗಳು ಸಮಾಜ ಜೀವನಕ್ಕೆ ಅನಿವಾರ್ಯ ಪ್ರಸಂಗಗಳೋಪಾದಿಯಲ್ಲಿ ಕಂಡುಬರುತ್ತಿವೆ. ಈ ಸಮುದಾಯದಲ್ಲಿ ಸ್ವಾತಂತ್ರ್ಯ ಬಂದರು ರೂಪ ಬದಲಾಣೆಯಾಗಿಲ್ಲ. ಸಮಸ್ಯೆ ಹಾಗೂ ಸಂಕಷ್ಟಗಳ ಮಧ್ಯೆ ನೆಲೆ ನಿಂತಿದ್ದಾರೆ.

ಹೆಳವರು ಪಾರಂಪರಿಕ ವೃತ್ತಿ ಬಗ್ಗೆ ಇಂದಿಗೂ ತುಂಬಾ ಗೌರವ ಹೊಂದಿದ್ದಾರೆ. ಇದು ಸಂತೋಷದಾಯಕ ವಿಷಯವಾಗಿದೆ, ಆದರೆ ಇಂದಿನ ಸ್ಪರ್ಧಾಜಗತ್ತಿನಲ್ಲಿ ತಮ್ಮ ವೃತ್ತಿಯೋಡನೆ ಸ್ಪರ್ಧಿಸಲು ಆಸಾಧ್ಯವಾದ ಕಾರಣ ಅವರು ವಾಸ್ತವಿಕ ಜಗತ್ತನ್ನು ಅರ್ಥ ಮಾಡಿಕೋಳ್ಳಬೇಕಾಗಿದೆ. ಇಂದು ಒಂದೆಡೆ ನೆಲೆ ನಿಂತು ತಾವು ಸಹ ಆಧುನಿಕ ಶಿಕ್ಷಣ ಪಡೆದಷ್ಟು ಹೊಸ ಹೊಸ ಲಾಭದಾಯಕ ಮತ್ತು ಬೇಡಿಕೆಗಳಿರುವ ಉದ್ಯೋಗಗಳಲ್ಲಿ ತೋಡಗಿ ಸ್ವಾವಲಂಬನೆಯಿಂದ ನ್ಯಾಯಯುತ ಜೀವನ ನಡೆಸಬೇಕಾಗಿದೆ. ಏಕೆಂದರೆ ಭವಿಷ್ಯದ ದಿನಗಳು ಹಿಂದಿನಷ್ಟು ಸರಳವಾಗಿಲ್ಲ.

# ಸಮಾರೋಪ

ಪ್ರಸ್ತುತ ಅಧ್ಯಯನವು ಒಂದು ಅಲೆಮಾರಿ ಸಮುದಾಯದಲ್ಲಿ ಪಾರಂಪರಿಕ ವೃತ್ತಿ ಅನುಸರಿಸುತ್ತಿರುವವರ ಪಾರಂಪರಿಕ ವೃತ್ತಿ ತೊರೆದವರ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು, ಅವರು ಅವಲಂಬಿಸಿರುವ ಕಸುಬುಗಳನ್ನು ತಿಳಿಯುವುದರೊಂದಿಗೆ ಅವರ ನಡುವಿನ ಭಿನ್ನತೆ ಮತ್ತು ಇಂದಿನ ಆಧುನಿಕ ಸ್ಪರ್ಧಾಜಗತ್ತಿನಲ್ಲಿ ಹೆಳವ ಸಮುದಾಯದವರು ಎದುರಿಸುತ್ತಿರುವ ಸಮಸ್ಯೆಗಳನ್ನು ಅವಲೋಕಿಸುವ ಒಂದು ಪ್ರಯತ್ನವಾಗಿದೆ ಎಂದು ಭಾವಿಸಿದ್ದೇನೆ.

ಭಾರತಕ್ಕೆ ಸ್ವಾತಂತ್ರ್ಯ ಬಂದು ಅರವತ್ತೆರಡು ವರ್ಷಗಳು ಗತಿಸಿದರೂ ಅಲೆಮಾರಿಗಳು ಇಂದಿಗೂ ಒಂದು ನೆಲೆಕಾಣದೆ ಆಳುವ ವರ್ಗಗಳ ದೌರ್ಜನ್ಯಕ್ಕೆ ಒಳಗಾಗಿ ಕನಿಷ್ಟ ಮೂಲಭೂತ ಸೌಲಭ್ಯಗಳನ್ನು ಪಡೆಯದಂತಹ ಸ್ಥಿತಿಯಲ್ಲಿವೆ. ದಿನದ ತುತ್ತು ಅನ್ನಕ್ಕಾಗಿ ಆಳುವ ವರ್ಗಗಳ ಮನೆ ಬಾಗಿಲ ಬಳಿ ಹೋಗಿ ಕೈ ಚಾಚುವುದು ಅನಿವಾರ್ಯವಾಗಿದೆ. ಏಕೆಂದರೆ ಆಳುವ ವರ್ಗಗಳು ಇವರ ಸಾಮಾಜಿಕ, ಆರ್ಥಿಕ ಸ್ವಾತಂತ್ರ್ಯವನ್ನೇ ಕಿತ್ತು ಕೊಂಡಿವೆ. ಇನ್ನು ಮೇಲಾದರು ಅಲೆಮಾರಿಗಳು ಎಚ್ಚೆತ್ತು ತಮ್ಮ ಹಕ್ಕಿಗಳಿಗಾಗಿ ಒಂದೆಡೆ ನೆಲೆನಿಂತು ಹೋರಾಡಬೇಕಾಗಿದೆ. ಹೋರಾಟ ಅಂತಹ ಸುಲಭವಾದುದಲ್ಲ. ಏಕೆಂದರೆ ಈ ಸಂಧರ್ಭದಲ್ಲಿ ಶೋಷಿತ ಸಮುದಾಯ ಗಳು ಹಲವು ಸಂಘರ್ಷಗಳನ್ನು ಎದುರಿಸಬೇಕಾಗುತ್ತದೆ. ಆಳುವ ವರ್ಗದ ಪಿತೂರಿಗಳ ಜೊತೆ ಯಲ್ಲಿಯೇ ಅಂತರಿಕ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ಈ ಬಗೆಯ ಬಿಕ್ಕಟ್ಟುಗಳು ಚಾರಿತ್ರಿಕವಾಗಿ ಎಲ್ಲಾ ಸಮುದಾಯಗಳನ್ನು ಬೆನ್ನಟ್ಟಿ ಬಂದಿವೆ. ಸಾವಿರಾರು ವರ್ಷಗಳ ಶೋಷಣೆಯ ಇತಿಹಾಸವಿರುವ ಈ ದೇಶದಲ್ಲಿ ಶೋಷಣೆಗೊಳಗಾದ ಸಮುದಾಯಗಳನ್ನು ಸಬಲೀಕರಿಸುವುದು ಸುಲಭದಮಾತೇನಲ್ಲ. ಆದರೆ ಸಬಲೀಕರಣಗೊಳ್ಳುವ ಮತ್ತು ಬದಲಾಗುವ ಸಮುದಾಯಗಳ ವರ್ತಮಾನದ ಬದುಕಿನ ಪರಿಸ್ಥಿತಿಗಳನ್ನು ಅರಿಯುವುದು, ಇಂದಿನ ಹಲವು ಅಗತ್ಯಗಳಲ್ಲಿ ಒಂದಾಗಿದೆ.

ಮೂಲತಃ ಆದಿವಾಸಿಯಾಗಿದ್ದ ಮಾನವ ಹಂತ ಹಂತವಾಗಿ ತನ್ನನ್ನು ಬಲಾಯಿಸಿಕೊಳ್ಳುತ್ತ ಇಂದಿನ ಸ್ಥಿತಿಗೆ ಬಂದಿದ್ದಾನೆ. ಹೀಗೆ ಪರಿವರ್ತನೆಯಾಗುತ್ತಾ ಸಮಾನತೆ ಇದ್ದ ಸಮಾಜದಲ್ಲಿ ಸ್ವಾರ್ಥವೆಂಬುವುದು ಅಸಮಾನತೆಯನ್ನು ಹುಟ್ಟುಹಾಕಿತು. ಸಮುದಾಯ ಸಮುದಾಯಗಳ ನಡುವೆ, ಸಮಾಜ ಸಮಾಜಗಳ ನಡುವೆ ಇದು ಹೆಚ್ಚಾಗಿ ಗೋಚರವಾಗುತ್ತಾ ಸೃಷ್ಟಿಯಲ್ಲಿ ಬಡವ ಶ್ರೀಮಂತ, ಮಾಲಿಕ ಕಾರ್ಮಿಕ, ಉಳ್ಳವ, ಉಳ್ಳದೆ ಇರುವವ, ಮೇಲು ಕೀಳು ಎಂಬ ವರ್ಗಗಳು ರೂಪಗೊಂಡವು. ಈ ವರ್ಗ ತಾರತಮ್ಯ ಎಷ್ಟರ ಮಟ್ಟಿಗೆ ಪ್ರಚಲಿತದಲ್ಲಿದೆ ಎಂದರೆ ಶ್ರೀಮಂತ, ಬಂಡವಾಳ ಶಾಹಿ ಗಣ್ಯರಿಗೆ ಮಾತ್ರ ಬದುಕುವ ಹಕ್ಕಿದೆಯೇ ಹೊರತು ಬಡವರಿಗೆ ಇಲ್ಲ ಎನ್ನುವಷ್ಟರಮಟ್ಟಿಗೆ ಶೋಷಣೆ ಸಮಾಜದಲ್ಲಿ ಗೋಚರಿಸುತ್ತಿದೆ. ಹಾಗೆಯೇ ಸಮಾಜದಲ್ಲಿ ಸಾಂಪ್ರದಾಯಿಕತೆ ಮತ್ತು ಆಧುನಿಕತೆಗಳೆರೆಡು ಎಕ ಕಾಲದಲ್ಲಿ ತಮ್ಮ ಅಸ್ತಿತ್ವವನ್ನು ಪ್ರಕಟಿಸುತ್ತಿವೆ.

ಇಂದು ಆರ್ಥಿಕ ಸ್ಥಿತಿಗತಿ, ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ನಿರ್ದರಿಸುತ್ತವೆ. ಅಸಮಾನತೆ ಸಮುದಾಯವೊಂದರ ಮುಂದುವರಿಕೆ ಹಾಗೂ ಹಿಂದುಳಿಯುವಿಕೆಯ ಮೇಲೆ ಪ್ರಭಾವ ಬೀರುತ್ತಲೇ ಇರುತ್ತದೆ. ಆಧುನಿಕ ಪರಿಸರದಲ್ಲಿ ಜಾತಿಯ ಪ್ರಭಾವ ಸ್ವಲ್ಪ ಕಡಿಮೆಯಾಗಿದೆ ಯಾದರು ಶತಮಾನಗಳಿಂದ ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳಿಂದ ದೂರವುಳಿದ ಸಮುದಾಯಗಳು ಇಂದಿಗೂ ಕಳಪೆ ಸ್ಥಿತಿಯಲ್ಲೆ ಬದುಕುತ್ತಿದ್ದಾರೆ.

ಪ್ರತಿಯೊಂದು ಬುಡಕಟ್ಟು ಸಮುದಾಯ ಮತ್ತು ಅಲೆಮಾರಿ ಸಮುದಾಯಗಳು ಪುರಾಣ ಪುಣ್ಯ ಕತೆಗಳಲ್ಲಿ ತಮ್ಮ ಹುಟ್ಟನ್ನು ಕೆಟ್ಟದಾಗಿ ಗುರುತಿಸಿ ಕೊಂಡಿದ್ದು ತಮ್ಮ ಮೂಲ ಪುರುಷ ಶಾಪಕ್ಕೆ ಒಳಗಾದ ಪ್ರಯುಕ್ತ ಅದರ ಪ್ರತಿಫಲವಾಗಿ ತಾವು ಈ ರೀತಿಯ ಜೀವನ ಸಾಗಿಸು ತ್ತಿದ್ದೇವೆಂದು ಭಾವಿಸಿದ್ದಾರೆ. ಹೆಳವರು ಇದಕ್ಕೆ ಹೊರತಾಗಿಲ್ಲ. ಮೇಲ್ವರ್ಗದ ಆಳುವ ಜನ ತಮ್ಮ ಸ್ವಾರ್ಥಕ್ಕಾಗಿ ಪುರಾಣ ಪುಣ್ಯಕತೆಗಳನ್ನು ಸೃಷ್ಟಿಸಿ ಅದರಲ್ಲಿ ಇಂತಹ ಸಮುದಾಯಗಳನ್ನು ಕೆಟ್ಟದಾಗಿ ಚಿತ್ರಿಸುವುದರ ಮೂಲಕ ಅವರಲ್ಲಿ ಮೂಡನಂಬಿಕೆಗಳನ್ನು ಭಿತ್ತಿ ಅವರ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಂಡು ತಮ್ಮ ಅಡಿಯಾಳುಗಳನ್ನಾಗಿಸಿಕೊಂಡಿದ್ದಾರೆ. ಇಂದಿಗೂ ಕೂಡ ಹಲವಾರು ಬುಡಕಟ್ಟು ಸಮುದಾಯಗಳು ಮತ್ತು ಅಲೆಮಾರಿಗಳು ಇವರ ಕಪಿಮುಷ್ಠಿಯಿಂದ ಹೊರಬರಲಾಗಿಲ್ಲ. ವೃತ್ತಿಗಳಲ್ಲಿಯು ಸಹ ಜಾತಿಯತೆಯನ್ನು ಭಿತ್ತಿ ಉತ್ತಮ ಅಂತಸ್ತು, ಅಧಿಕಾರ ಹಾಗು ಲಾಭದಾಯಕ ಹುದ್ದೆಗಳನ್ನು ತಾವೇ ಅನುಭವಿಸುತ್ತಾ ಬಂದಿದ್ದಾರೆ. ಹೀಗಾಗಿ ಶೋಷಿತ ಸಮುದಾಯಗಳು ತಮ್ಮ ಶ್ರಮದ ಪ್ರತಿಫಲಕ್ಕಾಗಿ ದಿನನಿತ್ಯ ತಮ್ಮ ಮನೆಯ ಬಾಗಿಲ ಬಳಿ ನಿಂತು ದೈನ್ಯತೆಯಿಂದ ಬೇಡುತ್ತಾ ತಾವು ಕೊಟ್ಟಷ್ಟು ಪಡೆದು ಜೀವಿಸಬೇಕಾದ ಪರಿಸ್ಥಿತಿ ನಿರ್ಮಿಸಿದ್ದಾರೆ.

ಇಂದಿಗೂ ಸಹ ಹೆಳವರು ತಮ್ಮ ಪಾರಂಪರಿಕ ವೃತ್ತಿ ಬಿಟ್ಟುಕೊಡಲು ಒಪ್ಪುತ್ತಿಲ್ಲ. ಪಾಪಂಪರಿಕ ವೃತ್ತಿಯೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದಾರೆ. ಇಂದಿನ ಆಧನಿಕ ಸ್ಪರ್ಧಾ ಜಗತ್ತಿನಲ್ಲಿ

ಪಾರಂಪರಿಕ ವೃತ್ತಿಯಿಂದ ಹೊಟ್ಟೆ ಹೊರೆಯುವುದು ಕಷ್ಟವೆಂದು ತಿಳಿಹೇಳಲು ಹೋದರೆ ಅವರನ್ನೇ ಅನುಮಾನದಿಂದ ನೋಡುತ್ತಾರೆ. ಏಕೆಂದರೆ ಪಾರಂಪರಿಕ ವೃತ್ತಿಯು ತಮ್ಮ ವಂಶಜರಿಗೆ ಅನ್ನ ಕೊಟ್ಟ ದೇವರು ಎಂಬುದು ಅವರ ಕಲ್ಪನೆಯಾಗಿದೆ. ಇವರಲ್ಲಿಯೇ ಕೆಲವರು ಪಾರಂಪರಿಕ ವೃತ್ತಿಯಲ್ಲಿದ್ದಾಗ ಅನುಭವಿಸಿದ ಅವಮಾನ ನೋವು ಕಷ್ಟಗಳಿಂದ ಬೇಸತ್ತು ಪಾರಂಪರಿಕ ವೃತ್ತಿ ತೊರೆದು ಒಂದೆಡೆ ನೆಲೆನಿಂತಿದ್ದಾರೆ. ಸಾಮಾಜಿಕವಾಗಿ ಇವರ ಸ್ಥಾನಮಾನಗಳು ಸ್ವಲ್ಪ ಉತ್ತಮ ವಾಗಿದೆ, ಆದರೆ ಆರ್ಥಿಕವಾಗಿ ಅಂತಹ ಬದಲಾವಣೆಯಾಗಿಲ್ಲ. ಏಕೆಂದರೆ ಪಾರಪರಿಕ ವೃತ್ತಿ ತೋರೆದವರಿಗೆ ಸ್ಪರ್ಧಾಜಗತ್ತಿನಲ್ಲಿ ವೃತ್ತಿಯ ಅವಕಾಶಗಳು ತೀರಾ ಕಡಿಮೆ ಇರುವ ಕಾರಣ ಮತ್ತು ಸ್ಪರ್ಧೆ ಇರುವುದರಿಂದ ಬೆರಳೆಣಿಕೆಯಷ್ಟು ಜನಮಾತ್ರ ಸರ್ಕಾರಿ ಮತ್ತು ಖಾಸಗಿ ನೌಕರಿ ಹಾಗೂ ವ್ಯಾಪಾರಗಳಲ್ಲಿ ತೊಡಗಿದ್ದು ಇತರರು ಶಿಕ್ಷಣ ಪಡೆಯದ ಕಾರಣ ಮತ್ತು ಆಸ್ತಿ, ಹಣ, ಮಾರ್ಗದರ್ಶನ, ತರಬೇತಿ ಇಲ್ಲದಿರುವುದರಿಂದ ಇರುವ ಸ್ವಲ್ಪ ಕೃಷಿ ಭೂಮಿಯಲ್ಲಿ ಜೀವನ ನಡೆಸಲಾಗದೆ ಮೇಲ್ವರ್ಗದವರ ಬಳಿ ಕೂಲಿ ಮಾಡುತ್ತಿದ್ದಾರೆ. ಅದು ಸಹ ವರ್ಷ ಪೂರ್ತಿ ದೊರೆಯುತ್ತಿಲ್ಲ.

ಪಾರಂಪರಿಕ ವೃತ್ತಿಯವರಲ್ಲಿ ಮತ್ತು ಪಾರಂಪರಿಕ ವೃತ್ತಿ ತೊರೆದವರಲ್ಲಿ ಇತ್ತೀಚೆಗೆ ಭಿನ್ನತೆಗಳು ಕಾಣುತ್ತಿವೆ. ಪಾರಂಪರಿಕ ವೃತಿಯವರು ತುಂಬಾ ಸಂಪ್ರದಾಯವಾದಿಗಳು, ಅನಕ್ಷರಸ್ಥರು, ಮುಗ್ಧರು, ಮೂಡನಂಬಿಕೆ ಉಳ್ಳವರು ಮತ್ತು ಪಾರಂಪರಿಕ ವೃತ್ತಿಯ ಮೇಲೆ ತುಂಬಾ ವ್ಯಾಮೋಹ ಉಳ್ಳವರಾಗಿರುವುದರಿಂದ ನೆಲೆನಿಂತ ಹೆಳವರು ಇವರನ್ನು ಅನಾಗರಿಕರೆಂದೇ ಭಾವಿಸಿದ್ದಾರೆ. ಪಾರಂಪರಿಕ ವೃತ್ತಿಯವರೊಡನೆ ಸಂಬಂಧ ಬೆಳೆಸುವುದು ಅವಮಾನವೆಂದು ಭಾವಿಸುತ್ತಿದ್ದಾರೆ. ಇತ್ತೀಚೆಗೆ ಪಾರಂಪರಿಕ ವೃತ್ತಿಯಲ್ಲಿರುವ ಹೆಳವರ ಮದುವೆ ಸಮಾರಂಭಗಳಿಗೆ ಹೋದರೆ ತಮ್ಮ ಸ್ಥಾನಮಾನಕ್ಕೆ ಧಕ್ಕೆ ಬರುತ್ತದೆ ಎಂದು ಹೋಗಲು ಹಿಂಜರಿಯುತ್ತಿದ್ದಾರೆ. ಹೀಗೆಯೇ ಇದು ಮುಂದುವರೆದರೆ ಇವರಿರ್ವರ ನಡುವೆ ದೊಡ್ಡ ಕಂದಕವೇ ಏರ್ಪಡುತ್ತದೆ. ಸಮುದಾಯದ ಮುಖಂಡರು ಇದರತ್ತ ಗಮನ ಹರಿಸಬೇಕಾಗಿದೆ.

ಸರ್ಕಾರ ಅಲೆಮಾರಿಗಳಿಗಾಗಿ ಅನೇಕ ರೀತಿಯ ಯೋಜನೆಗಳನ್ನು ಹಾಕಿ ಕೊಂಡರು ಯೋಜನೆಯ ಫಲಶೃತಿಯು ದೊರೆಯುತ್ತಿಲ್ಲ. ಅಲೆಮಾರಿಗಳಾಗಿದ್ದಂತವರಿಗೆ ಆಶ್ರಯ ಯೋಜನೆ ಯಂತಹ ಒಂದು ಮನೆಯಾದರೆ ಸಾಕೆ?. ನಿಶ್ಚಿತ ನೆಲೆಯಿಂದ ಅಲೆಮಾರಿಗಳು ಒಂದು ಕಡೆ ನಿಲ್ಲಲು ಸಾಧ್ಯವಿಲ್ಲ ಅನ್ನ ಬಟ್ಟೆಯ ಪೂರೈಕೆಯಾಗಬೇಕು. ಹಾಗಾಗಿ ಇವೆಲ್ಲವನ್ನು ನೀಗಿಸಲು ದುಡಿಯುವ ಕೈಗಳಿಗೆ ಕೆಲಸ ಕೊಟ್ಟಾಗ ಮಾತ್ರ ಸಾಧ್ಯವಾಗುತ್ತದೆ. ದೇಶದ ಬಡತನ ಎಲ್ಲಿಯವರೆಗೆ ನಿರ್ಮೂಲನೆಯಾಗುವುದಿಲ್ಲವೋ ಅಲ್ಲಿಯವರೆಗೆ ಅಲೆಮಾರಿಗಳು ಅತಂತ್ರ ಸ್ಥಿತಿಯಲ್ಲೇ ಬದುಕ ಬೇಕಾಗುತ್ತದೆ.

ಅಲೆಮಾರಿಗಳ ಕ್ಷೇಮಾಭಿವೃದ್ಧಿಗಾಗಿ ರೂಪಗೊಂಡ ಸರ್ಕಾರದ ಯೋಜನೆಗಳು

ಮಧ್ಯವರ್ತಿಗಳ ಪಾಲಾಗುವುದನ್ನು ತಪ್ಪಿಸಬೇಕು. ಸರ್ಕಾರಿ ಕಛೇರಿಗಳಿಗೆ ಹೋಗುವುದೆಂದರೆ ಅಲೆಮಾರಿಗಳು ಇಂದಿಗೂ ಬೆಚ್ಚಿ ಬೀಳುತ್ತಾರೆ. ಕಾರಣ ಇವರ ಅಜ್ಞಾನವನ್ನು ದುರುಪಯೋಗ ಪಡಿಸಿಕೊಂಡು ಅಧಿಕಾರಿಗಳು ಹಣ ಪಡೆಯುತ್ತಿರುವುದು. ಕೊಡದಿದ್ದರೆ ದರ್ಪದಿಂದ ವರ್ತಿಸುತ್ತಾ ಕಾರಣವಿಲ್ಲದೆ ಅಲೆದಾಡಿಸುತ್ತಾರೆ. ಇಂತಹ ಸ್ಥಿತಿಯಿಂದಾಗಿ ಸರ್ಕಾರದ ಸಹಾಯ ದೊರೆಯ ಬಹುದೆಂದು ದೂರದ ಆಶೆ ಇಟ್ಟುಕೊಂಡು ಬರುವ ಅಲೆಮಾರಿಗಳಿಗೆ ಇಲ್ಲಿಯ ಉಸಿರು ಕಟ್ಟಿಸುವ ವಾತಾವರಣ ಕಂಡು ಕೂಲಿ ಸಿಕ್ಕರೆ ಮಾಡಿದರಾಯಿತು. ಇಲ್ಲದಿದ್ದರೆ ಉಪವಸ ಮಲಗಿದರಾಯಿತು ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಸರ್ಕಾರ ಇನ್ನು ಮುಂದಾರು ಇಂತಹ ಅಲೆಮಾರಿ ಸಮುದಾಯಗಳ ಬಗ್ಗೆ ವಿಶೇಷ ಗಮನಹರಿಸಿ ಇವರಿಗೂ ಕೂಡ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಅವರು ಕೂಡ ಎಲ್ಲಾ ಜನರಂತೆ ಒಂದು ಕಡೆ ನೆಲೆನಿಂತು ಬದುಕಲು ಅವಕಾಶ ಮಾಡಿಕೊಡಬೇಕಾಗಿದೆ. ಜೊತೆಗೆ ಸಮುದಾಯಾದ ಮುಖಂಡರ ಪಾತ್ರವು ಅಷ್ಟೆ ಪ್ರಮುಖವಾಗಿದೆ.

**ಅಧ್ಯಯನದ ಫಲಿತಗಳು**

೨ ಹೆಳವ ಸಮುದಾಯದ ವೇಷಭೂಷಣ,ಭಾಷೆ, ಧರ್ಮ, ಸಂಸ್ಕೃತಿಯ ಮೇಲೆ ಅನ್ಯಸಂಸ್ಕೃತಿಯ ಪ್ರಭಾವವಾಗಿರುವುದರಿಂದ ಮೆಲ್ನೋಟಕ್ಕೆ ಹೆಳವರೆಂದು ಗುರುತಿಸುವುದು ಕಷ್ಟವಾಗುತ್ತದೆ. ಇವರ ಜೀವನ ಶೈಲಿ ಬದಲಾಗುತ್ತಿದೆ.

೨ ಹೆಳವ ಸಮುದಾಯದವರು ಅಲೆಮಾರಿಗಳಾಗಿ ಊರೂರು ಅಲೆಯುತ್ತಿದ್ದರೂ ತಮ್ಮದೆ ಆದ ಜೀವನ ಕ್ರಮ ಅನುಸರಿಸಿಕೊಂಡು ವಿಶಿಷ್ಟವಾದ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಈ ಸಮುದಾಯವು ಆಧುನಿಕ ಪ್ರಭಾವಕ್ಕೆ ಸಿಲುಕಿ ಹಂತ, ಹಂತವಾಗಿ ಬದಲಾಗುತ್ತಿದೆ.

೨ ಹೊಟ್ಟೆಪಾಡಿಗಾಗಿ ವಂಶಾವಳಿ ಹೇಳಿಕೊಂಡು ಊರೂರು ಅಲೆಯುವ ಇವರು ತಾವು ದುಡಿದ ದುಡಿಮೆಯಲ್ಲಿ ಸ್ವಲ್ಪಭಾಗವನ್ನು ಭವಿಷ್ಯತ್ತಿಗಾಗಿ ಉಳಿಸಿಕೊಳ್ಳಬೇಕೆಂಬ ಮನೋ ಭಾವನೆ ಹೊಂದಿಲ್ಲ.

೨ ಹೆಳವರಲ್ಲಿ ಪುರುಷರು ಜನನ, ಮರಣ ಬರೆದುಕೊಳ್ಳುವ ಮಟ್ಟಿಗಾದರು ಅಕ್ಷರಜ್ಞಾನ ಪಡೆದಿದ್ದರೆ ಮಹಿಳೆಯರಲ್ಲಿ ಶೇ. ೨೭ ರಷ್ಟು ಜನರು ಸಹ ಪ್ರಾಥಮಿಕ ಶಿಕ್ಷಣ ಪಡೆದಿಲ್ಲ ಇವರ ಆರ್ಥಿಕ ಸ್ಥಿತಿಯೇ ಇದಕ್ಕೆ ಕಾರಣವಾಗಿದೆ.

೨ ಹೆಳವ ಸಮುದಾಯದವರು ಕೃಷಿಕರನ್ನೇ ಅವಲಂಬಿಸಿ ಬದುಕುವರಾಗಿರುವುದರಿಂದ ನಿಶ್ಚಿತ ಆದಾಯವನ್ನು ತರುವ ಯಾವ ಆರ್ಥಿಕ ಮೂಲಗಳನ್ನು ಹೊಂದಿಲ್ಲ.

- ಅಲೆಮಾರಿ ಹೆಳವರಲ್ಲಿ ಮತ್ತು ನೆಲೆನಿಂತ ಹೆಳವರಲ್ಲಿ ಇತ್ತೀಚೆಗೆ ಸಾಮಾಜಿಕ ವೈರುಧ್ಯಗಳು ಕಂಡುಬರುತ್ತಿವೆ.
- ಇಂದಿನ ಆಧುನಿಕ ಸ್ಪರ್ಧಾಜಗತ್ತಿನಲ್ಲಿ ಹೆಳವರು ತಮ್ಮ ಪಾರಂಪರಿಕ ವೃತ್ತಿಯೊಡನೆ ಸ್ಪರ್ಧಿಸಲಾಗದೆ ಅತಂತ್ರ ಸ್ಥಿತಿಯಲ್ಲಿದ್ದಾರೆ.
- ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಕ್ಷೇತ್ರಗಳಲ್ಲಿ ಹಿಂದುಳಿದು ಸರ್ಕಾರದ ಯಾವ ಸೌಲಭ್ಯಗಳು ದೊರೆಯದೆ ಕಂಗಾಲಾಗಿರುವ ಹೆಳವ ಸಮುದಾಯದವರ ಸ್ಥಿತಿ ತೀರಾ ಚಿಂತಾಜನಕವಾಗಿದೆ.

## ಪರಾಮರ್ಶನ ಗ್ರಂಥಗಳು

೧ ಹೆಳವರ ಸಂಸ್ಕೃತಿ ಡಾ. ಹರಿಲಾಲ್ ಪವಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೩

೨ ಡೊಂಬರು ಒಂದು ಚಾರಿತ್ರಿಕ ಹಿನ್ನೋಟ (ಸಂ), ಡಾ. ಎ.ಎಸ್. ಪ್ರಭಾಕರ, ಡಾ. ಟಿ.ಎನ್. ಚಂದ್ರಕಾಂತ, ಸಿದ್ಧಾರ್ಥ ಪ್ರಕಾಶನ ಹೊಸಪೇಟೆ, ೨೦೦೬.

೩ ಹೆಳವರ ಕಾವ್ಯಗಳು (ಸಂ), ಡಾ. ಜೀ.ಶಂ. ಪರಮಶಿವಯ್ಯ, ಸಾಹಿತ್ಯಸದನ ಮಾನಸ ಗಂಗೊತ್ರಿ ಮೈಸೂರು, ೧೯೭೪.

೪ ಹೆಳವರು ಮತ್ತು ಅವರ ಕಾವ್ಯಗಳು (ಸಂ), ಎಚ್.ಎಲ್. ನಾಗೇಗೌಡ, ಸಾಹಿತ್ಯ ಸದನ ಪ್ರಕಾಶನ ಬೆಂಗಳೂರು, ೧೯೯೨.

೫ ಕರ್ನಾಟಕ ಹೆಳವರು ಒಂದು ಜನಪದಿಯ ಅಧ್ಯಯನ (ಸಂ), ಡಾ. ಕೆ. ಹರಿಲಾಲ ಪವಾರ್ ಕರ್ನಾಟಕ ವಿಶ್ವವಿಧ್ಯಾನಿಲಯ ಧಾರವಾಡ, ೧೯೯೦.

೬ ಹೆಳವರು, ಡಾ. ಎ.ಎಸ್. ಪ್ರಭಾಕರ, ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆ ಹಿಂದುಳಿದ ವರ್ಗಗಳ ಇಲಾಖೆ ಬೆಂಗಳೂರು ಇವರಿಗೆ ಸಲ್ಲಿಸಿದ ವರದಿ. ೨೦೦೬.

೭ ಹೆಳವರು, ನಿಂಗಣ್ಣ ಸಣ್ಣಕ್ಕಿ., ಜಾನಪದ ವೈಭವ, ಪೂರ್ಣಿಮಾ ಪ್ರಕಾಶನ ಗೋಕಾಕ. ೧೯೮೦

೮ ಹೆಳವರು. ಡಾ.ಪಿಕೆ ರಾಜಶೇಖರ. ಜನಪದ ಸಂಭ್ರಮ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೧೯೮೦.

೯ ಅಲೆಮಾರಿಗಳ ಶಾಪಗ್ರಸ್ತ ಪಯಣ ಡಾ. ಎ.ಎಸ್. ಪ್ರಭಾಕರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, .೨೦೦೫.

೧೦. ಭಾರತೀಯ ಸಮಾಜ ಪರಿಚಯ, ಚ.ನ. ಶಂಕರರಾವ್, ಜೈಭಾರತ್ ಪ್ರಕಾಶನ ಮಂಗಳೂರು, ೨೦೦೫.

೧೧ ಭಾರತೀಯ ಸಾಮಾಜಿಕ ಸಮಸ್ಯೆಗಳು, ಪ್ರೊ. ಎಂ. ನಾರಾಯಣ, ಚೇತನ ಬುಕ್ ಹೌಸ್ ಮೈಸೂರು, ೨೦೦೫.

೧೨ ಇಂಡಿಯಾಸ್ ಕಮೂನಿಟಿಸ್ ಕೆ.ಎಸ್. ಸಿಂಗ್ ಆಕ್ಸಫರ್ಡ ಯ್ಯೂನಿವರ್ಸಿಟಿ ಪ್ರೆಸ್, ೧೯೯೮

೧೩ ದ ಮೈಸೂರು ಟ್ರೈಬ್ಸ್ ಆಂಡ್ ಕ್ಯಾಸ್ಟ್ಸ್ ಎಚ್.ವಿ. ನಂಜುಂಡಯ್ಯ, ಅನಂತ ಕೃಷ್ಣ ಅಯ್ಯರ ಮಿತ್ತಲ್ ಪಬ್ಲಿಕೇಶನ್ಸ್, ನ್ಯೂಡೆಲ್ಲಿ, ೧೯೨೨.

## ಆಯ್ಕೆ ಮಾಡಿದ ಕುಟುಂಬಗಳ ಸ್ತ್ರೀ-ಪುರುಷರ ಪ್ರಮಾಣ

| ಕ್ರಮ ಸಂಖ್ಯೆ | ತಾಲ್ಲೂಕು | ಗ್ರಾಮ | ಕುಟುಂಬಗಳ ಸಂಖ್ಯೆ | ಪಾರಂಪರಿಕ ವೃತ್ತಿಯವರು ಮತ್ತು ಪಾರಂಪರಿಕ ವೃತ್ತಿ ತೊರೆದವರು | ಗಂಡು | ಹೆಣ್ಣು | ಒಟ್ಟು | ಸ್ತ್ರೀ - ಪುರುಷರ ಸರಾಸರಿ ಪ್ರಮಾಣ |
|---|---|---|---|---|---|---|---|---|
| ೦೧ | ರಾಯಭಾಗ | ಮಂಟೂರು | ೨೫ | ಪಾರಂಪರಿಕ ವೃತ್ತಿಯವರು | ೭೭ | ೫೭ | ೧೩೪ | ೧೦೦೦-೭೪೦ |
| ೦೨ | ರಾಯಭಾಗ | ಮಂಟೂರು | ೨೫ | ಪಾರಂಪರಿಕ ವೃತ್ತಿ ತೊರೆದವರು | ೫೭ | ೪೪ | ೧೦೧ | ೧೦೦೦-೭೭೧ |
| ೦೩ | ಗೋಕಾಕ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿಯವರು | ೫೭ | ೪೦ | ೯೭ | ೧೦೦೦-೭೦೧ |
| ೦೪ | ಗೋಕಾಕ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿ ತೊರೆದವರು | ೬೦ | ೪೬ | ೧೦೬ | ೧೦೦೦-೭೬೬ |
| | | | ೧೦೦ | ಒಟ್ಟು | ೨೫೧ | ೧೮೭ | ೪೩೮ | |

## ಆಯ್ಕೆ ಮಾಡಿದ ಕುಟುಂಬಗಳ ವಸತಿ ಮಾದರಿಗಳು

| ಕ್ರ. ಸಂ. | ತಾಲ್ಲೂಕು | ಗ್ರಾಮ | ಪಾರಂಪರಿಕ ವೃತ್ತಿ ಮತ್ತು ಪಾರಂಪರಿಕ ವೃತ್ತಿ ತೊರೆದವರು | ಆಯ್ಕೆ ಮಾಡಿದ ಕುಟುಂಬಗಳು | ಗುಡಿಸಲು | ಬಾಡಿಗೆ ಮನೆ | ಹಂಚಿನ ಮನೆ | ಆಶ್ರಯಮನೆ | ಆರ್.ಸಿ.ಸಿ. ಮನೆ |
|---|---|---|---|---|---|---|---|---|---|
| ೧ | ರಾಯಭಾಗ | ಮಂಟೂರು | ಪಾರಂಪರಿಕ ವೃತ್ತಿ | ೨೫ | – – | ೦೧ | ೨೩ | – – | ೦೧ |
| ೨ | ರಾಯಭಾಗ | ಮಂಟೂರು | ಪಾರಂಪರಿಕ ವೃತ್ತಿ ತೊರೆದವರು | ೨೫ | – – | ೦೧ | ೨೩ | ೦೧ | – – |
| ೩ | ಗೋಕಾಕ್ | ಜೋಕಾನಟ್ಟಿ | ಪಾರಂಪರಿಕ ವೃತ್ತಿ | ೨೫ | – – | – – | ೨೦ | ೦೪ | ೦೧ |
| ೪ | ಗೋಕಾಕ್ | ಜೋಕಾನಟ್ಟಿ | ಪರಂಪಾರಿಕ ವೃತ್ತಿ ತೊರೆದವರು | ೨೫ | ೦೧ | – – | ೨೧ | ೦೧ | ೦೨ |
| | | | ಒಟ್ಟು | ೧೦೦ | ೦೧ | ೦೨ | ೮೭ | ೦೬ | ೦೪ |

ಬೆಳಗಾಂ ಜಿಲ್ಲೆಯ ಮಂಜಟೂರು ಮತ್ತು ಜೋಕಾನಟ್ಟಿ ಗ್ರಾಮಗಳಲ್ಲಿ

ಪಾರಂಪರಿಕ ವೃತ್ತಿಯವರ ಮತ್ತು ಪಾರಂಪರಿಕ ವೃತ್ತಿ ತೊರೆದವರ ಭೂ ಹಿಡುವಳ ಚಿತ್ರಣ

| ಕ್ರಮ ಸಂಖ್ಯೆ | ತಾಲ್ಲೂಕು | ಗ್ರಾಮ | ಆಯ್ಕೆ ಮಾಡಿದ ಕುಟುಂಬಗಳ ಸಂಖ್ಯೆ | ಪಾರಂಪರಿಕ ವೃತ್ತಿಯವರು/ ಪಾರಂಪರಿಕ ವೃತ್ತಿ ಬಿಟ್ಟವರು | ಹೊಂದಿರುವ ಕೃಷಿ ಭೂಮಿ ಎಕರೆಗಳಲ್ಲಿ | | | ಭೂ ರಹಿತರು |
|---|---|---|---|---|---|---|---|---|
| | | | | | ಒಣ | ನೀರಾವರಿ | ಒಟ್ಟು | |
| ೧ | ರಾಯಭಾಗ | ಮಂಟೂರು | ೨೫ | ಪಾರಂಪರಿಕ ವೃತ್ತಿಯವರು | ೧೨ | ೩೪ ೧/೨ | ೪೬ ೧/೨ | ೦೪ |
| ೨ | ರಾಯಭಾಗ | ಮಂಟೂರು | ೨೫ | ಪಾರಂಪರಿಕ ವೃತ್ತಿ ತೊರೆದವರು | ೮ ೧/೨ | ೩೮ ೧/೨ | ೪೭ | ೦೫ |
| ೩ | ಗೋಕಾಕ್ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿಯವರು | ೦೪ | ೩೩ | ೩೭ | ೦೫ |
| ೪ | ಗೋಕಾಕ್ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿ ತೊರೆದವರು | ೦೨ | ೩೮ | ೪೦ | - - |
| | | | ೧೦೦ | ಒಟ್ಟು | ೨೬ ೧/೨ | ೧೪೪ | ೧೭೦ ೧/೨ | ೧೪ |

ಬೆಳಗಾಂ ಜಿಲ್ಲೆಯ ಆಯ್ಕೆ ಮಾಡಿದ ಗ್ರಾಮದ ಕುಟುಂಬಗಳಲ್ಲಿನ ಪಾರಂಪರಿಕ ವೃತ್ತಿಯವರು

ಮತ್ತು ಪಾರಂಪರಿಕ ವೃತ್ತಿ ತೊರೆದರಲ್ಲಿನ ಶೈಕ್ಷಣಿಕ ಸ್ಥಿತಿಗತಿ (೧ ರಿಂದ ೫ ವರ್ಷದ ಒಳಗಿನ ಮಕ್ಕಳನ್ನು ಹೊರತುಪಡಿಸಿ)

| ಕ್ರ. ಸಂ. | ಗ್ರಾಮ | ಆಯ್ಕೆಯಾದ ಕುಟುಂಬಗಳು | ಪಾರಂಪರಿಕ ವೃತ್ತಿಯವರು/ ಪಾರಂಪರಿಕ ವೃತ್ತಿ ತೊರೆದವರು | ಒಟ್ಟು ಜನಸಂಖ್ಯೆ | ಗಂಡು | ಹೆಣ್ಣು | ೧ ರಿಂದ ೫ ವರ್ಷದ ಒಳಗಿನ ಮಕ್ಕಳು | | ಅಕ್ಷರಸ್ಥರು | | ಅನಕ್ಷರಸ್ಥರು | |
|---|---|---|---|---|---|---|---|---|---|---|---|---|
| | | | | | | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಮಂಟೂರು | ೨೫ | ಪಾರಂಪರಿಕ ವೃತ್ತಿಯವರು | ೧೩೪ | ೭೭ | ೫೭ | ೦೭ | ೦೫ | ೪೨ | ೧೩ | ೩೫ | ೪೪ |
| ೨ | ಮಂಟೂರು | ೨೫ | ಪಾರಂಪರಿಕ ವೃತ್ತಿ ತೊರೆದವರು | ೧೦೧ | ೫೭ | ೪೪ | ೦೫ | ೦೧ | ೩೫ | ೧೫ | ೨೨ | ೨೯ |
| ೩ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿಯವರು | ೯೭ | ೫೭ | ೪೦ | ೦೫ | ೦೨ | ೩೦ | ೦೯ | ೨೭ | ೩೧ |
| ೪ | ಜೋಕಾನಟ್ಟಿ | ೨೫ | ಪಾರಂಪರಿಕ ವೃತ್ತಿ ತೊರೆದವರು | ೧೦೬ | ೬೦ | ೪೬ | ೦೩ | ೦೬ | ೪೩ | ೧೪ | ೧೭ | ೩೨ |
| | | ೧೦೦ | ಒಟ್ಟು | ೪೩೮ | ೨೫೧ | ೧೮೭ | ೨೦ | ೧೪ | ೧೫೦ | ೫೧ | ೧೦೧ | ೧೩೬ |

## ಹೆಳವರ ಸಾಕ್ಷರತೆಯ ಪ್ರಮಾಣ

ಸಾಕ್ಷರತೆ: ಜನಗಣತಿ ಮಾಹಿತಿ: ೨೦೦೧

(ಹೆಳವರ ಸಾಕ್ಷರತೆ ಪ್ರಸ್ತುತ ಅಧ್ಯಯನದಲ್ಲಿ ಪಡೆದ ಮಾಹಿತಿ)

| ಕ್ರಮ ಸಂಖ್ಯೆ | ವಿವರಗಳು | ಒಟ್ಟು | ಮಹಿಳೆಯರು | ಪುರುಷರು |
|---|---|---|---|---|
| ೧ | ರಾಜ್ಯದ ಒಟ್ಟು ಸಾಕ್ಷರತೆ | ಶೇ. ೬೭.೦೪ | ೫೭.೪೫ | ೭೬.೨೯ |
| ೨ | ಪರಿಶಿಷ್ಟ ಜಾತಿ ಸಾಕ್ಷರತೆ | ಶೆ. ೫೨.೬೦ | ೪೧.೭೦ | ೬೩.೮೦ |
| ೩ | ಪರಿಶಿಷ್ಟ ವರ್ಗದ ಸಾಕ್ಷರತೆ | ಶೇ.೪೮.೩೦ | ೩೬.೬೦ | ೫೯.೭೦ |
| ೪ | ಅಂತರಃ ಪರಿಶಿಷ್ಟ ಜಾತಿ (೧-೨) | -೧೪.೧೪ | -೧೫.೭೫ | -೧೨.೪೯ |
| ೫ | ಅಂತರಃ ಪ.ಪಂ.(೧-೩) | -೧೮.೭೪ | -೨೦.೮೫ | -೧೬.೫೯ |
| ೬ | ಹೆಳವರ ಸಾಕ್ಷರತೆ | ೪೩.೪೭ | ೮.೮೨ | ೩೪.೬೫ |

## ಮಾಹಿತಿದಾರರು

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಸ್ಥಳ |
|---|---|---|---|---|
| ೧ | ಗಂಗವ್ವ ಲಕ್ಷ್ಮಣ ಹೆಳವರ | ೭೧ | ಗೃಹಿಣ | ಮಂಟೂರು |
| ೨ | ಯಲ್ಲಪ್ಪ ಲಕ್ಷ್ಮಣ ಹೆಳವರ | ೪೫ | ಖಾಸಗಿವೈದ್ಯ | ಮಂಟೂರು |
| ೩ | ರಾಜು ಮಹಾದೇವಿ ಹೆಳವರ | ೨೧ | ಬಿ.ಕಾಂ. ವಿದ್ಯಾರ್ಥಿ | ಮಂಟೂರು |
| ೪ | ಕಾಶವ್ವ ಬಾಳಪ್ಪ ಹೆಳವರ | ೬೮ | ಗೃಹಿಣಿ | ಮಂಟೂರು |
| ೫ | ಮಹಾದೇವಿ ಯಲ್ಲಪ್ಪ ಹೆಳವರ | ೩೫ | ಗೃಹಿಣಿ | ಮಂಟೂರು |
| ೬ | ವಿಜಯಕುಮಾರ ಯಲ್ಲಪ್ಪ ಹೆಳವರ | ೧೯ | ಡಿಪ್ಲೊಮೊ ವಿದ್ಯಾರ್ಥಿ | ಮಂಟೂರು |
| ೭ | ಶಕುಂತಲಾ ಸಿದ್ಧಪ್ಪ ಹೆಳವರ | ೨೮ | ಕೂಲಿ | ಮಂಟೂರು |
| ೮ | ಸತ್ಯವ್ವ ಮಲ್ಲಿಕಾರ್ಜುನ ಹೆಳವರ | ೩೪ | ಕೂಲಿ | ಮಂಟೂರು |
| ೯ | ಸದಾಶಿವ ಲಕ್ಷ್ಮಣ ಹೆಳವರ | ೨೮ | ವಂಶಾವಳ | ಮಂಟೂರು |
| ೧೦ | ಸಿದ್ಧಪ್ಪ ಲಕ್ಷ್ಮಣ ಹೆಳವರ | ೩೬ | ವಂಶಾವಳ | ಮಂಟೂರು |
| ೧೧ | ಮಹಾದೇವ ಸತ್ಯಪ್ಪ ಹೆಳವರ | ೫೫ | ವಂಶಾವಳ | ಮಂಟೂರು |
| ೧೨ | ಅಮೃತ ರುದ್ರಪ್ಪ ಹೆಳವಿ | ೪೮ | ಎಲ್.ಐ.ಸಿ.ಏಜೆಂಟ | ಜೋಕಾನಟ್ಟಿ |
| ೧೩ | ಬಾಲಪ್ಪ ಸಿದ್ಧಪ್ಪ ದೊಡಮನಿ | ೫೦ | ವಂಶಾವಳ | ಜೋಕಾನಟ್ಟಿ |
| ೧೪ | ಲಕ್ಷ್ಮಣ ಹಣಮಂತ ಹೆಳವರ | ೩೩ | ವಂಶಾವಳ | ಜೋಕಾನಟ್ಟಿ |
| ೧೫ | ಪಕೀರಪ್ಪ ಯಲ್ಲಪ್ಪ ಹೆಳವರ | ೯೦ | ಮನೆ | ಜೋಕಾನಟ್ಟಿ |
| ೧೬ | ಶಂಕರ ಅಮರಪ್ಪ ಹೆಳವರ | ೨೭ | ಡ್ರೈವರ್ | ಜೋಕಾನಟ್ಟಿ |
| ೧೭ | ಗುರುಪುತ್ರ ರುದ್ರಪ್ಪ ಹೆಳವರ | ೪೬ | ಕೃಷಿ | ಜೋಕಾನಟ್ಟಿ |
| ೧೮ | ಮಲ್ಲಪ್ಪ ಬಾಲಪ್ಪ ಹೆಳವರ | ೬೦ | ಕೃಷಿ | ಜೋಕಾನಟ್ಟಿ |
| ೧೯ | ಲಲಿತಾ ಮಾರುತಿ ಹೆಳವರ | ೩೫ | ಕೂಲಿ | ಜೋಕಾನಟ್ಟಿ |
| ೨೦ | ಕಾಶಪ್ಪ ಬಾಲಪ್ಪ ಹೆಳವರ | ೨೮ | ಕೂಲಿ | ಜೋಕಾನಟ್ಟಿ |

ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ

## ಹೆಳವ ಸಮುದಾಯ : ಪರಂಪರೆ ಮತ್ತು ಆಧುನಿಕತೆಯ ಸಂಘರ್ಷ

### ವ್ಯಕ್ತಿ ಸಂದರ್ಶನದ ಪ್ರಶ್ನಾವಳಿ

ಅ. ಕೌಟುಂಬಿಕ

೧. ನಿಮ್ಮ ಕುಟುಂಬವನ್ನು ಯಾರು ಮುನ್ನಡೆಸುತ್ತಾರೆ? ಮುಖ್ಯ ತೀರ್ಮಾನಗಳನ್ನು ಕುಟುಂಬದ ಎಲ್ಲ ಸದಸ್ಯರು ಸೇರಿ ತೆಗೆದುಕೊಳ್ಳುವಿರಾ? ಅಥವಾ ಕುಟುಂಬದ ಮುಖ್ಯಸ್ಥರೇ ತೆಗೆದುಕೊಳ್ಳುತ್ತಾರೆಯೇ?

೨. ನಿಮ್ಮ ಕುಟುಂಬದ ಸದಸ್ಯರು ಹಿಂದೆಗಿಂತ ಈಗ ಹೆಚ್ಚು ಸ್ವಂತ ನಿರ್ಣಯ ತೆಗೆದುಕೊಳ್ಳುವವರು ಎಂದೆನಿಸುವುದೇ?

ಹೌದು/ಇಲ್ಲ

೩. ಹೌದು/ಇಲ್ಲ ಕಾರಣಗಳೇನು?

೪. ಅಲೆಮಾರಿ ಕುಟುಂಬಗಳು ಮತ್ತು ನೆಲೆನಿಂತ ಕುಟುಂಬಗಳು ಪರಸ್ಪರ ಹೇಗೆ ಬದುಕುತ್ತವೆ?

೫. ಎರಡು ಕುಟುಂಬಗಳ ನಡುವೆ ರಕ್ತ ಸಂಬಂಧಗಳು ಈ ಮೊದಲಿಗಿಂತ ಈಗ ಹೆಚ್ಚು ಜಟಿಲವಾಗಿದೆಯೇ? ಹೌದು/ಇಲ್ಲ

೬. ಹೌದು/ಇಲ್ಲ ಕಾರಣಗಳೇನು?

೭. ಪಾರಂಪರಿಕ ವೃತ್ತಿಯನ್ನು ತೊರೆದ ಮೇಲೆ ನಿಮ್ಮ ಕುಟುಂಬದಲ್ಲಿ ಏನಾದರೂ ಬದಲಾವಣೆ ಕಂಡುಬರುತ್ತಿದೆಯೇ? ಹೌದು/ಇಲ್ಲ

೮. ಹೌದು/ಇಲ್ಲ ಕಾರಣಗಳೇನು?

೯. ಪಾರಂಪರಿಕ ವೃತ್ತಿಯಲ್ಲಿರುವವರ ಜೊತೆ ಸಂಬಂಧ ಬೆಳೆಸುವಾಗ ಮುಜುಗರ/ಅವಮಾನ ಅನಿಸುತ್ತದೆಯೇ? ಹೌದು/ಇಲ್ಲ

೧೦. ಹೌದು/ಇಲ್ಲ ಕಾರಣಗಳೇನು?

೧೧. ಪಾರಂಪರಿಕ ವೃತ್ತಿಯನ್ನು ಯಾವಾಗ ಬಿಡಬೇಕೆನ್ನಿಸಿತು?

೧೨. ಅಲೆಮಾರಿ ಗುಂಪುಗಳನ್ನು ಮುಖ್ಯವಾಹಿನಿಗೆ ತರಬೇಕೆನ್ನಿಸಿಲ್ಲವೇ? ಪಾರಂಪರಿಕ ವೃತ್ತಿಯನ್ನು ಅವರು ಯಾಕಾಗಿ ತೊರೆಯುತ್ತಿಲ್ಲ?

೧೩. ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು?

೧೪. ತೀರ್ಮಾನಗಳನ್ನು ತೆಗೆದುಕೊಳ್ಳುವ ವ್ಯಕ್ತಿ ಬದಲಾಗಿದ್ದರೆ ಅದಕ್ಕಿರುವ ಕಾರಣಗಳೇನು?

೧೫. ನಿಮ್ಮ ಕುಟುಂಬದ ಒಟ್ಟಾರೆಯ ಸ್ಥಿತಿ ಈ ಹಿಂದಿಗಿಂತ ಬದಲಾಗಿದೆ ಎಂದು ನಿಮಗೆ ಅನ್ನಿಸುತ್ತಿದೆಯೇ?

ಹೌದು / ಇಲ್ಲ

೧೬. ಬದಲಾಗಿದ್ದರೆ ಅದಕ್ಕೆ ಯಾವ ಕಾರಣಗಳನ್ನು ಕೊಡಬಯಸುತ್ತೀರಿ?

೧೭. ಕೂಡು ಕುಟುಂಬಗಳು ಇವೆಯೇ?

೧೮. ಈಗ ಕುಟುಂಬಗಳು ಬದುಕುತ್ತಿರುವ ರೀತಿ ಬದಲಾಗಿದೆ ಎಂದೆನ್ನಿಸುವುದೇ ಅದಕ್ಕೆ ಏನು ಕಾರಣಗಳು?

೧೯. ನಿಮ್ಮ ಕುಟುಂಬದಲ್ಲಿ ಹೆಣ್ಣು ಪ್ರಮುಖ ತೀರ್ಮಾನಗಳನ್ನು ತೆಗೆದುಕೊಳ್ಳುವಳೇ? ಹೌದು / ಇಲ್ಲ

೨೦ ಹೌದು / ಇಲ್ಲ ಕಾರಣಗಳೇನು?

೨೧. ನಿಮ್ಮ ಸಮುದಾಯದ ಕುಟುಂಬಗಳ ಸ್ವರೂಪ ಬದಲಾಗುತ್ತಿದೆಯೇ ಅದಕ್ಕೆ ಕಾರಣಗಳೇನು?

**ಆ. ಸಾಮಾಜಿಕ**

೧. ನಿಮ್ಮ ಸುತ್ತ ಬದುಕುತ್ತಿರುವ ಇತರ ಜಾತಿಗಳು ನಿಮ್ಮನ್ನು ಯಾವ ಬಗೆಯಲ್ಲಿ ನಡೆಸಿಕೊಳ್ಳುತ್ತಿವೆ?

೨. ನಿಮ್ಮ ಸುತ್ತ ಬದುಕುತ್ತಿರುವ ಇತರೆ ಜಾತಿಗಳಿಗಿಂತ ನಿಮ್ಮ ಜಾತಿಯು ಹಿಂದುಳಿದಿದೆ ಎಂದು ತಾವು ಭಾವಿಸುವಿರಾ?

೩. ಹಿಂದುಳಿದಿದ್ದರೆ ಅದಕ್ಕೆ ಯಾವ ಯಾವ ಕಾರಣಗಳನ್ನು ನೀಡಬಯಸುವಿರಿ?

೪. ಪಾರಂಪರಿಕ ಹೆಳವ ವೃತ್ತಿಯಲ್ಲಿರುವವರನ್ನು ಬೇರೆ ಜಾತಿಯ ಜನ ಹೇಗೆ ನಡೆಸಿಕೊಳ್ಳುತ್ತಾರೆ?

೫. ಅವರು ನಿಮ್ಮ ಸಮುದಾಯವನ್ನು ಹೀನಾಯವಾಗಿ ನೋಡುತ್ತಿದ್ದರೆ ಅದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?

೬. ಹೀಗೆ ನಿಮ್ಮನ್ನು ಹೀನಾಯವಾಗಿ ನೋಡುವುದು ಹಿಂದಿಗಿಂತ ಜಾಸ್ತಿ ಆಗುತ್ತಿದೆಯೋ ಅಥವಾ ಕಡಿಮೆ ಆಗಿದೆಯೇ?

೭. ಕಡಿಮೆ ಅಥವಾ ಹೆಚ್ಚಾಗುತ್ತಿರುವುದಕ್ಕೆ ಕಾರಣಗಳೇನು?

೮. ಪಾರಂಪರಿಕ ವೃತ್ತಿ ತೊರೆದ ಮೇಲೆ ಸಮಾಜದಲ್ಲಿ ನಿಮ್ಮ ಸ್ಥಾನಮಾನಗಳಲ್ಲಿ ಬದಲಾವಣೆಯಾಗಿದೆ ಅನ್ನಿಸುತ್ತದೆಯೇ?
ಹೌದು/ ಇಲ್ಲ

೯. ಹೌದು/ಇಲ್ಲ ಕಾರಣಗಳೇನು?

೧೦. ಪಾರಂಪರಿಕ ವೃತ್ತಿಯನ್ನು ನೀವೇ ಬಿಡಲು ಬಯಸಿದಿರೋ ಅಥವಾ ಬೇರೆಯವರು ಒತ್ತಾಯಿಸಿದರೋ?

೧೧. ಪಾರಂಪರಿಕ ವೃತ್ತಿಯನ್ನು ಮುಂದುವರಿಸುವವರ ಬಗ್ಗೆ ನಿಮ್ಮ ಅಭಿಪ್ರಾಯಗಳೇನು?

೧೨. ಜನನ, ಮರಣದ ದಾಖಲಾತಿಯನ್ನು ಇಂದು ಸರ್ಕಾರ ನಿರ್ವಹಿಸುತ್ತಿರುವುದರಿಂದ ನೀವು ವಂಶಾವಳಿ ಹೇಳುವುದನ್ನು ಜನ ಇನ್ನೂ ಬಯಸುತ್ತಾರೆಯೇ?

೧೩. ನಿಮ್ಮ ಸಮುದಾಯ ಉಚ್ಛ್ರಾಯ ಸ್ಥಿತಿಗೆ ಬರಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಬಹುದು?

೧೪. ನಿಮ್ಮ ಸಮುದಾಯ ಹಿಂದುಳಿದಿರುವುದಕ್ಕೆ ನಿಮ್ಮ ಸಮಾಜದ ಒಳಗೆ ಇರುವ ಮೂಢ ನಂಬಿಕೆಗಳು ಸಣ್ಣತನ ಆಂತರಿಕ ವಿಘಟನೆ ಕಾರಣ ಎನ್ನಿಸುವುದೇ?

೧೫. ಮೊದಲಿಗಿಂತ ಈಗ ಹೆಳವ ಸಮುದಾಯದವರು ಮುಂದುವರೆದಿದ್ದಾರೆ ಎಂದೆನ್ನಿಸುವುದೇ?

೧೬. ಮುಂದುವರೆದಿದ್ದರೆ ಅಥವಾ ಹಿಂದುಳಿದಿದ್ದರೆ ಅದಕ್ಕೆ ಯಾವ ಕಾರಣಗಳನ್ನು ಕೊಡಬಯಸುತ್ತೀರಿ?

೧೭. ಪಾರಂಪರಿಕ ವೃತ್ತಿಯಲ್ಲಿರುವವರು ಮತ್ತು ಆಧುನಿಕ ವೃತ್ತಿಯಲ್ಲಿರುವವರ ಸಾಮಾಜಿಕ ಸ್ಥಾನಮಾನಗಳು ಹೇಗಿವೆ?

೧೮. ನೀವು ವಂಶಾವಳಿ ಹೇಳಲು ಒಕ್ಕಲುಮನೆಗಳಿಗೆ ಹೋದಾಗ ಅವರು ನಿಮಗೆ ಗೌರವಿಸುತ್ತಾರೆಯೇ? ಹೌದು / ಇಲ್ಲ

೧೯ ಹೌದು / ಇಲ್ಲ ಕಾರಣಗಳೇನು?

೨೦. ಈಗಲೂ ನೀವು ಅಲೆಮಾರಿಗಳಾಗಿರಲು ಬಯಸುತ್ತೀರಾ? ಹೌದು / ಇಲ್ಲ

೨೧. ಹೌದು/ಇಲ್ಲ ಕಾರಣಗಳೇನು?

೨೨. ಅಲೆಮಾರಿತನದಿಂದಾಗಿ ನಿಮ್ಮ ಸಮುದಾಯ ಹಿಂದುಳಿದಿದೆ ಎಂದೆನ್ನಿಸುವುದೇ?

೨೩. ನೆಲೆನಿಂತವರು ನಿಮ್ಮ ಗುಂಪಿಗಿಂತ ಮುಂದುವರಿದ್ದಾರೆ ಎಂದೆನಿಸುವುದೇ?

**೭. ಆರ್ಥಿಕ**

೧. ನಿಮ್ಮ ಮನೆಯಲ್ಲಿನ ಸದಸ್ಯರು ಈಗ ಯಾವ ಯಾವ ದುಡಿಮೆಗಳಲ್ಲಿ ತೊಡಗಿಕೊಂಡಿದ್ದಾರೆ?

೨. ಹೆಚ್ಚು ಆದಾಯ ಬರುವ ಯಾವ ದುಡಿಮೆಗಳಲ್ಲಿ ನಿಮ್ಮ ಕುಟುಂಬದವರು ತೊಡಗಿಕೊಂಡಿದ್ದಾರೆ?

೩. ಈ ಹಿಂದೆ ನಿಮ್ಮ ತಂದೆ, ನೀವು ಮತ್ತು ನಿಮ್ಮ ತಾತ ಯಾವ ಯಾವ ದುಡಿಮೆಗಳಲ್ಲಿ ತೊಡಗಿಕೊಂಡಿದ್ದೀರಿ?

೪. ನಿಮ್ಮ ಕುಲ ಕಸುಬು ಯಾವುದು?

೫. ಇಂದಿಗೂ ನಿಮ್ಮ ಕಸಬು ಪ್ರಸ್ತುತ ಅನ್ನಿಸುತ್ತಿದೆಯೇ? ಹೌದು / ಇಲ್ಲ

೬. ಹೌದು / ಇಲ್ಲ ಕಾರಣಗಳಾವವು?

೭. ಪಾರಂಪರಿಕ ವೃತ್ತಿಯನ್ನು ತೊರೆದು ಬೇರೆ ವೃತ್ತಿಯನ್ನು ನಿರ್ವಹಿಸುವಾಗ ಆದ ಅಡ್ಡಿಗಳೇನು?

೮. ಪಾರಂಪರಿಕ ವೃತ್ತಿಯನ್ನು ತೊರೆದು ಬೇರೆ ವೃತ್ತಿಯನ್ನು ನಿರ್ವಹಿಸುವಾಗ ನಿಮಗೆ ಮುಜುಗರವಾಯಿತೇ? ಹೌದು/ಇಲ್ಲ

೯. ಹೌದು/ಇಲ್ಲ ಕಾರಣಗಳೇನು?

೧೦. ಪಾರಂಪರಿಕ ವೃತ್ತಿಯನ್ನು ತೊರೆದಿರುವುದು ನಿಮಗೆ ಆರ್ಥಿಕವಾಗಿ ಅನುಕೂಲ ಅನಿಸಿದೆಯೇ? ಹೌದು/ಇಲ್ಲ

೧೧. ಹೌದು/ಇಲ್ಲ ಕಾರಣಗಳೇನು?

೧೨. ಕುಲ ಕಸುಬನ್ನು ಬಿಟ್ಟು ಬೇರೆ ದುಡಿಮೆಯಲ್ಲಿ ತೊಡಗಿಕೊಳ್ಳಬೇಕೆಂದು ಅನ್ನಿಸಿದಾಗ ನೀವು ನಿರೀಕ್ಷಿಸಿದ ನೆರವು ಸಿಕ್ಕಿತೇ?
ಹೌದು / ಇಲ್ಲ

೧೩. ಹೌದು/ಇಲ್ಲ ಕಾರಣಗಳೇನು?

೧೪. ಹೇಗೆ ಯಾರ ನೆರವು ಸಿಕ್ಕಿತು ಯಾಕೆ ಸಿಗಲಿಲ್ಲ?

೧೫. ಸರ್ಕಾರ ತಮ್ಮನ್ನು ಅಭಿವೃದ್ಧಿ ಪಡಿಸಲು ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಅವು ಗೊತ್ತಿವೆಯೇ?

೧೬. ಸರ್ಕಾರದ ಯೋಜನೆಗಳು ನಿಮ್ಮನ್ನು ಅಭಿವೃದ್ಧಿ ಪಡಿಸುತ್ತವೆ ಎಂದು ನಿಮ್ಮಗನ್ನಿಸುತ್ತಿದೆಯೇ? ಹೌದು / ಇಲ್ಲ

೧೭. ಹೌದು/ಇಲ್ಲ ಕಾರಣಗಳೇನು?

೧೮. ನಿಮಗೆ ಕೃಷಿ ಭೂಮಿ ಇದೆಯೇ?

೧೯. ನಿಮಗೆ ಕೃಷಿ ಭೂಮಿ ಇದ್ದರೆ ಅದನ್ನು ತಾವು ಹೇಗೆ ಪಡೆದುಕೊಂಡಿರಿ?

೨೦. ಕೃಷಿ ಇಂದು ನಿಮ್ಮ ಕುಟುಂಬವನ್ನು ಸಾಕಬಲ್ಲದು ಎಂದೆನ್ನಿಸುತ್ತಿದೆಯೇ? ಹೌದು/ಇಲ್ಲ

೨೧. ಹೌದು / ಇಲ್ಲ ಕಾರಣಗಳಾವವು?

೨೨. ನಿಮ್ಮ ಮನೆಯ ಹೆಣ್ಣು ಮಕ್ಕಳೂ ಸಹ ದುಡಿಮೆಯಲ್ಲಿ ತೊಡಗಿರುವರೇ?

೨೩. ನಿಮ್ಮ ವೃತ್ತಿಯಿಂದ ವಾರ್ಷಿಕವಾಗಿ ಎಷ್ಟು ಆದಾಯ ಬರುತ್ತದೆ?

೨೪. ಯಾವ ಯಾವ ದುಡಿಮೆಗಳಲ್ಲಿ ತೊಡಗಿದ್ದಾರೆ?

೨೫. ಇಂದು ನಿಮ್ಮ ಸಮುದಾಯವು ಯಾವ ಬಗೆಯ ದುಡಿಮೆಗಳಲ್ಲಿ ತೊಡಗಿಕೊಂಡಿದೆ? ಹೇಗೆ ಅಭಿವೃದ್ಧಿಯಾಗಬಹುದೆಂದು

ಭಾವಿಸುವಿರಿ?

೨೬. ಯಾಕಾಗಿ ನೀವು ಪಾರಂಪರಿಕ ವೃತ್ತಿಯನ್ನು ಅವಲಂಬಿಸಿದ್ದೀರಿ?

೨೭. ಪಾರಂಪರಿಕ ವೃತ್ತಿಯನ್ನು ಅವಲಂಬಿಸಿರುವ ನೀವು ಅದು ಲಾಭದಾಯಕ ಅನ್ನಿಸುವುದೇಯೇ? ಹೌದು/ಇಲ್ಲ

೨೮. ಹೌದು/ಇಲ್ಲ ಕಾರಣಗಳೇನು?

೨೯. ಹಿಂದೆಗಿಂತಲೂ ಈಗ ಹೆಚ್ಚು ಹೆಚ್ಚು ದುಡಿಮೆಯ ಅವಕಾಶಗಳು ಇವೆ ಎಂದೆನ್ನಿಸುವುದೇ?

೩೦. ಯಾವ ದುಡಿಮೆ ನಿಮಗೆ ಹೆಚ್ಚು ಇಷ್ಟವಾಗುತ್ತದೆ ಏಕೆ?

೩೧. ಹೊಸ ಹೊಸ ದುಡಿಮೆಯ ವಿಧಾನಗಳನ್ನು ಅವಲಂಬಿಸಿ ತಮ್ಮ ಸಮುದಾಯ ಬದಲಾಗುತ್ತಿದೆ ಎಂದು ಅನ್ನಿಸುತ್ತಿದೆಯೇ? ಹೌದು/ಇಲ್ಲ

೩೨. ಹೌದು / ಇಲ್ಲ ಕಾರಣಗಳೇನು?

**ಈ. ಶಿಕ್ಷಣ**

೧. ನಿಮ್ಮ ಮನೆಯಲ್ಲಿ ಎಷ್ಟು ಜನ ಓದು ಬರಹ ಕಲಿತಿದ್ದಾರೆ?

೨. ಸರ್ಕಾರಿ ನೌಕರಿಯಲ್ಲಿರುವವರು ಎಷ್ಟು ಯಾವ ನೌಕರಿ ಮಾಡುತ್ತಿದ್ದಾರೆ?

೩. ನಿಮ್ಮ ಊರಲ್ಲಿ ಶಾಲೆ ಇದೆಯೇ?

೪. ನಿಮ್ಮ ಮಕ್ಕಳನ್ನು ಕಳುಹಿಸಲಾಗುತ್ತಿದೆಯೇ? ಹೌದು/ಇಲ್ಲ

೫. ಹೌದು / ಇಲ್ಲ ಕಾರಣಗಳಾವವು?

೬. ಶಿಕ್ಷಣ ಪಡೆದರೆ ನಿಮ್ಮ ಸಮುದಾಯ ಬದಲಾಗುತ್ತದೆ ಎಂದು ಭಾವಿಸುವಿರಾ? ಹೌದು / ಇಲ್ಲ

೭. ಹೌದು/ಇಲ್ಲ ಕಾರಣಗಳೇನು?

೮. ನೌಕರಿ ಪಡೆದು ಪಟ್ಟಣದಲ್ಲಿರುವ ನಿಮ್ಮವರು ನಿಮ್ಮ ಹಳ್ಳಿಗೆ, ನಿಮ್ಮ ಸಮುದಾಯಕ್ಕೆ ಯಾವ ಬಗೆಯಲ್ಲಾದರೂ ನೆರವಿಗೆ ಬಂದಿದ್ದರೇ? ಹೌದು/ಇಲ್ಲ

೯ ಹೌದು / ಇಲ್ಲ ಕಾರಣಗಳೇನು?

೧೦. ಹೀಗೆ ನೌಕರಿ ಪಡೆದು ಪಟ್ಟಣದಲ್ಲಿರುವ ನಿಮ್ಮವರು ಮುಂದುವರಿದಿದ್ದಾರೆ ಎಂದೆನ್ನಿಸುವುದೇ?

೧೧. ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿರುವಿರಾ? ಹೌದು/ಇಲ್ಲ

೧೨. ಹೌದು / ಇಲ್ಲ ಕಾರಣಗಳೇನು?

೧೩. ನಿಮ್ಮ ಮಕ್ಕಳನ್ನು ಎಲ್ಲಿಯವರೆಗೂ ಓದಿಸಲು ಬಯಸುತ್ತೀರಿ?

೧೪. ನಿಮ್ಮ ಮಕ್ಕಳು ಓದಿ ಮುಂದೆ ಏನಾಗಲೂ ಬಯಸುತ್ತೀರಿ?

೧೫. ನೀವು ವಂಶಾವಳಿ ಹೇಳಲು ಹೋದಾಗ ನಿಮ್ಮ ಮಕ್ಕಳನ್ನು ಜೊತೆಗೆ ಕರೆದುಕೊಂಡು ಹೋಗುತ್ತೀರಿ ಇದರಿಂದ ಅವರ ಶಿಕ್ಷಣಕ್ಕೆ ತೊಂದರೆಯಾಗುವುದಿಲ್ಲವೇ? ಹೌದು/ಇಲ್ಲ

೧೬. ಹೌದು / ಇಲ್ಲ ಕಾರಣಗಳೇನು?

೧೭. ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರ ನೀಡುತ್ತೀರುವ ಸೌಲಭ್ಯಗಳ ಬಗ್ಗೆ ನಿಮಗೆ ಎಷ್ಟು ಗೊತ್ತು?

೧೮. ಮೀಸಲಾತಿಯ ಮೂಲ ನೌಕರಿ ಸಿಗಬಹುದೆಂದು ಭಾವಿಸಿದ್ದೀರಾ?

೧೯. ಮೀಸಲಾತಿ ಹಿಂದುಳಿದ ಸಮುದಾಯಗಳನ್ನು ಸಬಲೀಕರಿಸಬಲ್ಲದು ಎಂದು ಭಾವಿಸಿದ್ದೀರಾ?

ಉ. ಸಾಂಸ್ಕೃತಿಕ

೧. ಚಾಪೆ ಹೆಳವರು, ಎತ್ತಿನ ಹೆಳವರು, ಗಂಟೆ ಹೆಳವರು ಒಂದೇ ಸಮುದಾಯದವರೆಂದು ನಿಮಗೆ ಅನ್ನಿಸುತ್ತದೆಯೇ? | ಹೌದು/ಇಲ್ಲ |

೨. ಹೌದು/ಇಲ್ಲ ಕಾರಣಗಳೇನು?

೩. ಚಾಪೆ ಹೆಳವರೊಡನೆ ನೀವು ಸಂಬಂಧ ಬೆಳೆಸಲು ಹಿಂಜರಿಯಲು ಕಾರಣಗಳೇನು?

೪. ಪಾರಂಪರಿಕ ವೃತ್ತಿ ಅನುಸರಿಸುವವರು ಮತ್ತು ತೊರೆದವರ ಮಧ್ಯೆ ಏನಾದರೂ ಭಿನ್ನತೆ ಇದೆ ಎಂದು ನಿಮಗನ್ನಿಸುವುದೇ?

| ಹೌದು/ ಇಲ್ಲ |

೫. ಹೌದು/ಇಲ್ಲ ಕಾರಣಗಳೇನು?

೬. ಇಂದಿನ ಆಧುನಿಕ ಸ್ಪರ್ಧಾ ಜಗತ್ತಿನಲ್ಲಿ ನೀವು ಪಾರಂಪರಿಕ ವೃತ್ತಿಯೊಡನೆ ಸ್ಪರ್ಧಿಸಲು ಸಾಧ್ಯವೇ? ಹೌದು/ಇಲ್ಲ

೭. ಹೌದು/ಇಲ್ಲ ಕಾರಣಗಳೇನು?

೮. ನಿಮಗೆ ಪಾರಂಪರಿಕ ವೃತ್ತಿ ಬಗ್ಗೆ ಗೌರವವಿದೆಯೋ ಅಥವಾ ಕೀಳರಿಮೆ ಇದೆಯೋ? ಗೌರವ/ಕೀಳರಿಮೆ

೯. ಈ ಭಾವನೆ ತಾಳಲು ಕಾರಣವೇನು?

೧೦. ಈ ಹಿಂದೆ ಸಮುದಾಯ ಯಾವ ಯಾವ ಹಬ್ಬ, ಹರಿದಿನಗಳನ್ನು ಆಚರಿಸುತ್ತಿತ್ತು?

೧೧. ಈ ಆಚರಣೆಗಳು ಕಾಲ ಕಾಲಕ್ಕೆ ಬದಲಾಗುತ್ತಾ ಬಂದಿವೆಯೇ? | ಹೌದು / ಇಲ್ಲ, |

ಹೌದು / ಇಲ್ಲ, ಹೇಗೆ ಬದಲಾಗಿವೆ ಬದಲಾಗಿಲ್ಲ?

೧೨. ಸಮುದಾಯದ ಆಚರಣೆಗಳು ಇಂದಿಗೂ ಪ್ರಸ್ತುತ ಅಂತ ಅನ್ನಿಸುತ್ತಿವೆಯೇ? ಹೌದು/ಇಲ್ಲ

೧೩. ಹೌದು / ಇಲ್ಲ ಕಾರಣಗಳೇನು?

೧೪. ಪ್ರಮುಖವಾಗಿ ಯಾವ ಆಚರಣೆಗಳು ನಿಮ್ಮ ಸಮುದಾಯದಲ್ಲಿ ಬದಲಾಗಿವೆ?

೧೫. ಯಾವ ಯಾವ ಹೊಸ ಆಚರಣೆಗಳು ಹೊಸದಾಗಿ ನಿಮ್ಮಿಂದ ಆಚರಿಸಲ್ಪಡುತ್ತಿವೆ ಕಾರಣಗಳೇನು?

೧೬. ನಿಮ್ಮ ಸಮುದಾಯದ ನಂಬಿಕೆ, ಸಂಪ್ರದಾಯಗಳು ಇವತ್ತಿಗೂ ಪ್ರಸ್ತುತ ಎಂದು ಅನ್ನಿಸುತ್ತಿದೆಯೇ? ಹೌದು/ಇಲ್ಲ

೧೭. ಹೌದು / ಇಲ್ಲ ಕಾರಣಗಳೇನು?

೧೮. ನಿಮ್ಮ ಸಮುದಾಯದ ನಂಬಿಕೆ ಸಂಪ್ರದಾಯಗಳು ಮೂಲಸ್ಥಿತಿಯಲ್ಲಿ ಉಳಿದಿವೆಯೋ ಅಥವಾ ಬದಲಾಗಿವೆಯೋ?

| ಹೌದು/ಇಲ್ಲ |

೧೯. ಹೀಗಾಗುವುದಕ್ಕೆ ಕಾರಣಗಳೇನು?

೨೦. ಈಗಿನ ಯುವಕರಲ್ಲಿ ನಿಮ್ಮ ಸಮುದಾಯದ ನಂಬಿಕೆ ಸಂಪ್ರದಾಯಗಳ ಕುರಿತು ಯಾವ ಭಾವನೆಗಳಿವೆ?

೨೧. ಇದಕ್ಕೆ ಕಾರಣಗಳೇನಿರಬಹುದು?

೨೨. ನಿಮ್ಮ ಸಮುದಾಯದಲ್ಲಿ ಈಗ ಮದುವೆಗಳು ಹೇಗೆ ನಡೆಯುತ್ತವೆ ಹಿಂದೆ ಹೇಗೆ ನಡೆಯುತ್ತಿದ್ದವು?

೨೩. ನಿಮ್ಮಲ್ಲಿಯ ಪಾರಂಪರಿಕ ಆಹಾರ ಪದ್ಧತಿ, ವೇಷಭೂಷಣ, ವೈದ್ಯ ಪದ್ಧತಿ ಹಾಡು ಕುಣಿತಗಳು ಉಳಿದಿವೆಯೇ?

೨೪. ಯಾಕೆ ಇವು ಉಳಿದಿವೆ ಮತ್ತು ಉಳಿದಿಲ್ಲ?

೨೫. ನಿಮ್ಮ ಸಂಸ್ಕೃತಿ ಜೀವನ ವಿಧಾನ ತಾನಾಗಿಯೇ ಬದಲಾಯಿತೇ ಅಥವಾ ಹೊರಗಿನ ಪ್ರಭಾವಗಳಿಂದಾಗಿ ಬದಲಾಯಿತೇ?

೨೬. ನಿಮ್ಮ ಮೂಲದೇವರು ಯಾವುದು ಮನೆ ದೇವರು ಯಾವುದು?

೨೭. ಈಗ ಯಾವ ಯಾವ ಬೇರೆ ದೇವರುಗಳನ್ನು ಪೂಜಿಸುತ್ತಿದ್ದೀರಿ ಏತಕ್ಕಾಗಿ ಪೂಜಿಸುತ್ತೀರಿ?

೨೮. ನಿಮ್ಮದೇ ದೇವರುಗಳಿಗೆ ಗುಡಿಗಳನ್ನು ನಿರ್ಮಿಸಲಾಗಿದೆಯೇ?

೨೯. ಯಾವಾಗ ನಿರ್ಮಿಸಲಾಯಿತು. ಏಕೆ ನಿರ್ಮಿಸಲಾಗಿಲ್ಲ?

೩೦. ದೇವರನ್ನು ಕುರಿತು ನಂಬಿಕೆಗಳು ಹಿಂದಿನಂತೆ ಈಗಲೂ ಬಲವಾಗಿವೆ ಎನ್ನಿಸುತ್ತಿದೆಯೇ? ಹೌದು/ಇಲ್ಲ

೩೧. ಹೌದು / ಇಲ್ಲ ಕಾರಣಗಳಾವವು?

೩೨. ಅಲೆಮಾರಿ ಹೆಳವರಿಗೆ ನೆಲೆ ನಿಂತ ಹೆಳವರು ಹೆಣ್ಣು ಕೊಡಲು ಸಂಬಂಧ ಬೆಳೆಸಲು ಬಯಸುವರೇ?

೩೩. ನಿಮ್ಮ ಸಾಂಪ್ರದಾಯಿಕ ಆಚರಣೆಗಳಲ್ಲಿ ಬೇರೆ ವೃತ್ತಿಯಲ್ಲಿರುವ ಮುಂದುವರಿದ ನಿಮ್ಮ ಜನ ಭಾಗವಹಿಸುವರೆ? ಹೌದು/ಇಲ್ಲ

೩೪. ಹೌದು/ಇಲ್ಲ ಕಾರಣಗಳೇನು?

೩೫. ನಿಮ್ಮ ಆಚರಣೆಗಳಲ್ಲಿ ಮುಂದುವರಿದವರಿಗೆ ನಂಬಿಕೆಗಳಿವೆಯೇ? ಹೌದು/ಇಲ್ಲ

೩೬. ಹೌದು/ಇಲ್ಲ ಕಾರಣಗಳೇನು?

೩೭. ನಿಮ್ಮ ಸಮುದಾಯದಲ್ಲಿ ಯಾರಾದರೂ ಮತಾಂತರವಾಗಿದ್ದಾರೆಯೇ? ಹೌದು/ಇಲ್ಲ

೩೮. ಹೌದು / ಇಲ್ಲ ಕಾರಣಗಳಾವವು?

೮. ರಾಜಕೀಯ

೧. ನಿಮ್ಮ ಊರಿನ ಮತದಾನದ ಪಟ್ಟಿಯಲ್ಲಿ ನಿಮ್ಮ ಹೆಸರು ಇದೆಯೇ? ಹೌದು/ಇಲ್ಲ

೨. ಹೌದು / ಇಲ್ಲ ಕಾರಣಗಳೇನು?

೩. ತಾವು ಪ್ರತಿ ಚುನಾವಣೆಯಲ್ಲಿ ಮತ ಚಲಾಯಿಸುವಿರಾ? ಹೌದು/ಇಲ್ಲ

೪. ಹೌದು / ಇಲ್ಲ ಕಾರಣಗಳೇನು?

೫. ಹಿಂದಿನಿಂದಲೂ ಯಾವ ಪಕ್ಷವನ್ನು ಬೆಂಬಲಿಸುತ್ತಾ ಬಂದಿದ್ದೀರಿ?

೬. ಯಾಕೆ ಆ ಪಕ್ಷವನ್ನು ಬೆಂಬಲಿಸಿದಿರಿ?

೭. ಈಗ ಯಾವ ಪಕ್ಷವನ್ನು ಬೆಂಬಲಿಸುತ್ತಿದ್ದೀರಿ?

೮. ಯಾಕೆ ಈ ಪಕ್ಷವನ್ನು ಬೆಂಬಲಿಸುತ್ತಿದ್ದೀರಿ?

೯. ನಿಮ್ಮ ಸಮುದಾಯಕ್ಕೆ ರಾಜಕೀಯ ಮೀಸಲಾತಿ ದೊರಕಿದೆಯೇ?

೧೦. ಯಾವ ಹಂತದಲ್ಲಿ (ಗ್ರಾಮ / ತಾಲೂಕು / ಜಿಲ್ಲಾ ಪಂಚಾಯಿತಿ) ಸಿಕ್ಕಿದೆ?

೧೧. ಹೀಗೆ ಸಿಕ್ಕಿದ ಮೀಸಲಾತಿಯಿಂದ ಸಮುದಾಯಕ್ಕೆ ಒಳಿತಾಗಿದೆಯೇ? ಹೌದು/ಇಲ್ಲ

೧೨. ಹೌದು / ಇಲ್ಲ ಕಾರಣಗಳೇನು?

೧೩. ನೀವು ಯಾವುದಾದರೂ ಚುನುವಣೆಗೆ ಸ್ಪರ್ಧಿಸಿದ್ದಿರಾ? ಹೌದು/ಇಲ್ಲ

೧೪. ಹೌದು/ಇಲ್ಲ ಕಾರಣಗಳೇನು?

೧೫. ಯಾವ ರಾಜಕೀಯ ಪಕ್ಷ ನಿಮ್ಮ ಸಮುದಾಯದ ಹಿತ ಬಯಸುತ್ತಿದೆ ಎಂದು ಭಾವಿಸುತ್ತೀರಿ ಹೇಗೆ?

೧೬. ತಾವು ಯಾವ ಯಾವ ಸಂಘಟನೆಗಳಲ್ಲಿ ಪಾಲ್ಗೊಂಡು ಚಳುವಳಿಗಳಲ್ಲಿ ತೊಡಗಿದ್ದೀರಿ?

೧೭. ನಿಮ್ಮ ಸಮುದಾಯ ಸಾಂಘಿಕವಾಗಿ ಯಾವ ಯಾವ ಚಳುವಳಿಗಳಲ್ಲಿ ತೊಡಗಿಕೊಂಡಿದೆ?

೧೮. ಸಂವಿಧಾನಬದ್ಧ ಮೀಸಲಾತಿಯಿಂದ ಶೋಷಿತ ಸಮುದಾಯಗಳು ಅಭಿವೃದ್ಧಿ ಆಗುತ್ತದೆ ಎಂದು ಭಾವಿಸುವಿರಾ? ಹೇಗೆ?

೧೯. ಸರ್ಕಾರದ ಯಾವ ಇಲಾಖೆ ನಿಮ್ಮ ಸಮುದಾಯಕ್ಕೆ ಪೂರಕವಾಗಿದೆ ಮತ್ತು ಯಾವ ಇಲಾಖೆ ಮಾರಕವಾಗಿದೆ? ಏಕೆ?

೨೦. ಈ ಕಾಲದ ಟಿವಿ, ಸಿನೀಮಾ ಮುಂತಾದ ಸಂಗತಿಗಳು ನಿಮ್ಮ ಸಮುದಾಯದ ಮೇಲೆ ಪ್ರಭಾವ ಬೀರಿವೆ ಎಂದೆನ್ನಿಸುವುದೇ?

೨೧. ಸಮುದಾಯಕ್ಕೆ ಅದರದ್ದೇ ಆದ ನ್ಯಾಯ ವ್ಯವಸ್ಥೆ, ಕಟ್ಟೆಮನೆ, ಕುಲ ಪಂಚಾಯ್ತಿ ವ್ಯವಸ್ಥೆ ಇದೆಯೇ?

೨೨. ಈ ಹಿಂದೆ ಈ ವ್ಯವಸ್ಥೆ ಇತ್ತೇ?

೨೩. ಈ ಕುಲಪಂಚಾಯ್ತಿ ಸ್ವರೂಪ ಬದಲಾಗಿದೆಯೇ? ಬದಲಾಗಿದ್ದರೆ ಹೇಗೆ ಮತ್ತು ಏಕೆ ಬದಲಾಗಿದೆ?

೨೪. ಈಗ ಕುಲದ ನ್ಯಾಯ ಪಂಚಾಯಿತಿಯನ್ನು ಯಾರು ನಿರ್ವಹಿಸುತ್ತಾರೆ?

೨೫. ಕುಲ ಪಂಚಾಯಿತಿಯನ್ನು ಸಮುದಾಯದ ಎಲ್ಲರೂ ಗೌರವಿಸುವರೇ?

೨೬. ಈಗ ಸಮುದಾಯದ ವ್ಯಾಜ್ಯಗಳು ಕುಲ ಪಂಚಾಯಿತಿಯನ್ನು ಮೀರಿ ಕೋರ್ಟು ಕಛೇರಿಗಳಿಗೆ ಹೋಗಿವೆಯೇ? ಕಾರಣಗಳೇನು?

೨೭. ನಿಮ್ಮ ಸಮುದಾಯದ ಹಿಂದೆ ಇದ್ದ ಸ್ಥಿತಿಯಲ್ಲಿಯೇ ಇದೆಯೇ ಅಥವಾ ಬದಲಾಗಿದೆ ಎಂದೆನ್ನಿಸುತ್ತಿದೆಯೇ?

೨೮. ಕಾರಣಗಳೇನು?


**ವ್ಯಕ್ತಿ ಸಂದರ್ಶನ ಪ್ರಶ್ನಾವಳಿ ಪಟ್ಟಿ ಸಿದ್ಧಪಡಿಸಿದವರು**

**ಡಾ. ಎ.ಎಸ್. ಪ್ರಭಾಕರ**<br>
ಹಿರಿಯ ಶ್ರೇಣಿ ಅಧ್ಯಾಪಕರು<br>
ಬುಡಕಟ್ಟು ಅಧ್ಯಯನ ವಿಭಾಗ<br>
ಕನ್ನಡ ವಿಶ್ವವಿದ್ಯಾಲಯ, ಹಂಪಿ

